• ಡಿವೈನ್ ಸ್ಪಾರ್ಕ್, ಕುದುರೆಮುಖ — ಇದರ ಸವಿನೆನಪಿಗೆ •

ಸಂಸಾರಿಗಳ ಸಾಧನಾ ಸಂಚಯ

# ವಿವೇಕ ಸಂಪದ

## ಒಲವಿನ ಔದಾರ್ಯ: ಕ್ಷಮೆ

ಉದ್ಯೋಗದ ಪರಿ– ದೇವರೊಲುಮೆಗೆ ದಾರಿ

DIVINE PARK

ॐ

DIVINE SPARK

उत्तिष्ठत ★ जाग्रत

ದೇವರು ಸ್ವೀಕರಿಸಲು ಇಂತಿರಲಿ ನಿಮ್ಮ ಸೇವೆ!

ಉತ್ತಿಷ್ಠತ

ಜಾಗ್ರತ

ಪರೀಕ್ಷಾ ಭೀತಿ ಓಡಿಸುವ ರೀತಿ

'ನೀನು ದಾಸನಾದರೆ ನಾನು ವಾಸವಾಗುವೆ'

'ನೀನು ಸೊನ್ನೆಯಾದರೆ ನಾನು ಸನ್ನೆಯಾಗುವೆ'

ದೀಪಾವಳಿ ಸಂಚಿಕೆ

ನವಂಬರ — ದಶಂಬರ, 1996

ಬಿಡಿಪ್ರತಿಯ ಬೆಲೆ: ರೂ. 6

# ಸಂಪದ ಸಲ್ಲಾಪ



'ನನ್ನನ್ನು ಗುರೂಜೀ ಎನ್ನಬೇಡಿ,
ನಾನು ಗುರೂಜೀ ಅಲ್ಲ,
ಗುರೂಜೀ ದಾಸಾನುದಾಸ ಮಾತ್ರ.'



# ದೀನ ದೇವೋ ಭವ !

'ದೀನ ದೇವೋ ಭವ', 'ದರಿದ್ರ ದೇವೋ ಭವ', 'ರೋಗಿ ದೇವೋ ಭವ', 'ಮೂರ್ಖ ದೇವೋ ಭವ', 'ಪಾಪಿ ದೇವೋ ಭವ'... ಹೌದು, ಇವೆಲ್ಲ ಸ್ವಾಮಿ ವಿವೇಕಾನಂದರು–ಶ್ರೀ ಗುರೂಜೀ, ಅಂದು ಹೃದಯತುಂಬಿ ನೀಡಿದ್ದ ಕರೆಗಳು.

ದೇವರು ದೇಗುಲದಲ್ಲಿ ಕಲ್ಲಾಗಿದ್ದಾನೆ ಎಂದೇ ಜನ ತಿಳಿದಿದ್ದ ಕಾಲದಲ್ಲಿ, ಶ್ರೀರಾಮಕೃಷ್ಣರು ಆ ಕಲ್ಲಿನಲ್ಲೂ ಆತ ಜಾಗೃತನಾಗಿದ್ದಾನೆ, ಆತ ಎಲ್ಲ ಜೀವರಲ್ಲೂ ಇದ್ದಾನೆ, ಎಲ್ಲ ಜೀವರ ಸೇವೆ ಮಾಡುವುದೆಂದರೆ ಆತನ ಸೇವೆ ಮಾಡಿದಂತೆಯೇ ಎಂದು ನರನೇ ಹರನು, ಜೀವಶಿವಸೇವೆಯೇ ಆ ದೇವರ ಪೂಜೆ ಎಂದೇ ಸಾರಿದರು. ಅವರ ಆ ತತ್ವವನ್ನು ಜಗಜ್ಜಾಹೀರು ಮಾಡುವುದಕ್ಕೆಂದೇ ಮುಡಿಪಾಗಿತ್ತು ಸ್ವಾಮಿ ವಿವೇಕಾನಂದರ ಜೀವನ. ಎಲ್ಲರಲ್ಲೂ ಆ ದೇವರಿರುವುದರಿಂದ ಎಲ್ಲರೂ ದೇವರೇ ಎಂದರು ಅವರು. ಜಾತಿ, ಮತ, ವರ್ಗ, ವರ್ಣ, ಮೇಲು, ಕೀಳು ಭಾವನೆಗಳಿಂದಾಗಿ ಸಮಾಜ ಜೀವನದಲ್ಲಿ ಜನಜನರೊಳಗೆ ತಾರತಮ್ಯ ತಾಂಡವವಾಡುತ್ತಿದ್ದ ಕಾಲ ಅದು; ಕೆಳ ವರ್ಗದ ಜನರನ್ನು ಮೇಲ್ವರ್ಗದ ಜನರು, ದೀನ, ದಲಿತ, ದರಿದ್ರರನ್ನು ಶ್ರೀಮಂತರು ಶೋಷಿಸುತ್ತಿದ್ದ ಕಾಲ ಅದು. ಆ ಜನರ ಶೋಷಣೆ ಎಂದರೆ ಅವರೊಳಗಿನ ದೇವರ ಶೋಷಣೆ ಎಂದೇ ಅವರಿಗೆ ತೋರಿತು, ಮೇಲಾಗಿ ಜನರಿಗೆ ದುಡಿಯುವ, ತಿಳಿಯುವ, ಸಭ್ಯರಾಗುವ ದಾರಿ ತೋರದೆ ಇರುವುದರಿಂದ ಅವರು ಆಲಸಿಗಳೂ, ಅಜ್ಞಾನಿಗಳೂ, ಅಸಭ್ಯರೂ ಆಗಿದ್ದಾರಷ್ಟೇ, ಅವರಿಗೆಲ್ಲ ಸರಿಯಾದ ದಾರಿ ತೋರಿಸುವ ಕೆಲಸ ಆಗಬೇಕು. ಅಜ್ಞಾನದಿಂದಾದ ಅವರ ತಪ್ಪುಗಳನ್ನೆಲ್ಲ ಕ್ಷಮಿಸಿ, ಎಲ್ಲ ಭೇದಭಾವಗಳನ್ನೂ ಬದಿಗೊತ್ತಿ ಅವರನ್ನು ಸರಿ ದಾರಿಯಲ್ಲಿ ಮುನ್ನಡೆಸುವ ಕೆಲಸ ಆಗಬೇಕು. ಸಮಾಜದ ಬಹುಪಾಲು ಜನ ಅಂಥವರೇ ಆದುದರಿಂದ ಅಂಥವರ ಉದ್ಧಾರ ಆಗದೆ ಸಮಾಜದ ಉದ್ಧಾರ ಆಗದು, ಭವ್ಯಭಾರತ ನಿರ್ಮಾಣ ಆಗದು. ಅದಕ್ಕೆಂದೇ ಅಂಥವರ ಉದ್ಧಾರಕ್ಕೆಂದೇ ಟೊಂಕ ಕಟ್ಟಬೇಕು. ಅವರೇ ಜೀವಂತ ದೇವರು, ಅವರ ಸೇವೆಯೇ ಆ ದೇವರ ಸೇವೆ–ಎಂದೇ ಸ್ವಾಮಿ ವಿವೇಕಾನಂದರು ಆ ರೀತಿ ಕರೆ ಕೊಟ್ಟಿದ್ದರು. ಕ್ಷಮೆಯಿಂದ ಪರಿಪುಷ್ಟವಾದ ಅವರ ದಯಾರ್ದ್ರ ಹೃದಯದ ಮಾರ್ದನಿ ಅದು. ಅನುಷ್ಠಾನ ವೇದಾಂತದ ವೀರ ಕಹಳೆಯ ಘರ್ಜನೆ ಅದು.

ದೇವರಿಗಾಗಿ ಬದುಕುವ ಮಂದಿ ಆಶ್ರಮಗಳಲ್ಲಿ, ಮಠಗಳಲ್ಲಿ ಇದ್ದು ದೇವರ ಪೂಜೆ ಮಾಡಿಕೊಂಡಿರುವುದಲ್ಲ–ಅವರು ಜೀವಂತ ದೇವರ ಪೂಜೆ ಮಾಡಲು ಸಮಾಜಕ್ಕಿಳಿಯಬೇಕು ಎಂದ ಅವರು ಆಧ್ಯಾತ್ಮವನ್ನು ಈ ರೀತಿ ದಂತಗೋಪುರದಿಂದ ಕೆಳಕ್ಕಿಳಿಸಿ ಅನುಷ್ಠಾನದ ಮೂಲಕ ನಿಜ ಜೀವನದ ಭಾಗವಾಗಿಸಿದರು. ತಮ್ಮ ಸೋದರ ಸನ್ಯಾಸಿಗಳ ಜೊತೆ ನೆರೆ ಬಂದಾಗ, ಪ್ಲೇಗ್ ರೋಗದ ಬಾಧೆ ತಟ್ಟಿದಾಗ ಬಡ ಜನರ ಸೇವೆಗೆ ಟೊಂಕ ಕಟ್ಟಿದರು. ಅವರು ದರಿದ್ರರಲ್ಲ–ದರಿದ್ರ ನಾರಾಯಣರು ಎಂದರು. ಅಸ್ಪೃಶ್ಯರೆಂದು ಪರಿಗಣಿಸಿದ್ದ ಜನರನ್ನೆಲ್ಲ ಕರೆದು ಪ್ರೀತಿಯಿಂದ ಉಣ ಬಡಿಸಿದರು. ಆ ಜನರ ನಗುವನ್ನು ಕಂಡು ಸಾಕ್ಷಾತ್ ನಾರಾಯಣನೇ ಸಂತೃಪ್ತನಾದನೆಂದು ಸಂತೋಷಪಟ್ಟರು. ಈ ಜೀವಶಿವಸೇವೆಯೇ ಅವರ ದೃಷ್ಟಿಯಲ್ಲಿ ಪರಮೋತ್ಕೃಷ್ಟ ಅಧ್ಯಾತ್ಮ ಸಾಧನೆ ಆಗಿತ್ತು. ಅಂಥ ದೀನ ಜನರ ಉದ್ಧಾರಕ್ಕಾಗಿ ತಾವು ನರಕಕ್ಕೆ ಬೇಕಾದರೂ ಹೋಗಲು ಸಿದ್ಧ ಎನ್ನುತ್ತಿದ್ದರು ಅವರು. ಅಂದು ಯೇಸುಕ್ರಿಸ್ತನಾಗಿ ಸಾರಿದ್ದ ಕ್ಷಮೆಯ ಹಿರಿಮೆಯನ್ನು ಅವರು ಸ್ವಾಮಿ ವಿವೇಕಾನಂದರಾಗಿಯೂ ಮತ್ತೊಮ್ಮೆ ಸಾರಿದರು.

ಜನರನ್ನು ಕ್ಷಮಿಸಿ ಅವರನ್ನು ಉದ್ಧಾರದ ದಾರಿಯಲ್ಲಿ ನಡೆಸಬೇಕೆಂಬ ಉದಾತ್ತ ಧ್ಯೇಯ ದಿಂದಲೇ ಅವರೀಗ ಗುರೂಜೀಯಾಗಿ ಡಿವೈನ್‌ಪಾರ್ಕ್‌ನಲ್ಲಿ ದುಡಿಯುತ್ತಿದ್ದಾರೆ. ಕ್ಷಮೆಯ ಮಹಿಮೆಯನ್ನಿಲ್ಲಿ ಬಯಲು ಮಾಡಿರುವ ಅವರು ದೀನ ದಲಿತರಿಗೂ ಸದ್ವಿಚಾರಗಳನ್ನು ಹಂಚಿ ಅವರನ್ನು ಪ್ರೀತಿಯಿಂದ ಮುನ್ನಡೆಸಬೇಕೆಂಬ ತಮ್ಮ ತುಡಿತವನ್ನು ತೋಡಿಕೊಂಡಿದ್ದಾರೆ. 'ನಾನು' ಭಾವವನ್ನು ಯಾವ ಸೇವೆ ಎಷ್ಟು ಮಟ್ಟಿಗೆ ಕರಗಿಸಬಹುದೆಂಬುದನ್ನೂ ಅದ್ಭುತವಾಗಿ ವಿವರಿಸಿರುವ ಅವರಿಲ್ಲಿ, ಉದ್ಯೋಗ ಯಾವುದೇ ಆದರೂ ಹೃದಯದ ಭಾವನೆಗಳ ತುಡಿತ ಎಂತಿದ್ದರೆ ಆ ದೇವರೊಲುಮೆ ಸಾಧ್ಯ ಎಂಬುದನ್ನು ತುಂಬ ಚೆನ್ನಾಗಿ ಬಿಂಬಿಸಿದ್ದಾರೆ. ಇನ್ನೊಂದು ಸಂಚಿಕೆ ನಿಮ್ಮ ಕೈಸೇರುವವರೆಗೂ ಈ ಸದ್ವಿಚಾರಗಳನ್ನು ಪುನಃ ಪುನಃ ಓದಿ ಮನನ ಮಾಡಿ ಮೆಲುಕು ಹಾಕಿ ಮೈಗೂಡಿಸಿಕೊಳ್ಳುವ ದೀಕ್ಷೆ ನಿಮ್ಮದಾಗಬೇಕು.

ಶ್ರೀ ಗುರೂಜೀ ಇಲ್ಲಿಂದಲೇ ಸೂಚಿಸಿದ ಜಾಗದಲ್ಲಿ ಕನ್ಯಾಕುಮಾರಿಯ ವಿವೇಕಾನಂದ ಕೇಂದ್ರದವರು ಕನ್ಯಾಕುಮಾರಿಯಲ್ಲಿ ತೋಡಿದ ಬೋರ್‌ವೆಲ್‌ನಲ್ಲಿ ಸಿಹಿ ನೀರಿನ ಸಮೃದ್ಧ ಒರತೆ ಚಿಮ್ಮಿ ಭೂಗರ್ಭಶಾಸ್ತ್ರಜ್ಞರನ್ನೆಲ್ಲ ಅವಕ್ಕಾಗಿಸಿದೆ. ನೀವು ಗುರೂಜೀಯವರಾದರೆ ಶ್ರೀ ಗುರೂಜೀ ಕೃಪೆ ನಿಮ್ಮ ಅಂತರ್ಯದ 'ನಾನು' ಭಾವವನ್ನು ಕರಗಿಸಿ ಆನಂದ, ಶಾಂತಿಗಳ ಚಿಲುಮೆ ಯನ್ನೂ ಹಾಗೇನೇ ಉಕ್ಕಿಸುವುದು ಖಂಡಿತ, ಅಂಥ ದಿನ ನಿಮ್ಮೆಲ್ಲರ ಪಾಲಿಗೆ ಬೇಗ ಬರಲಿ ! ಈ ದೀಪಾವಳಿ ನಿಮ್ಮ ಬಾಳಿಗೆ ಹೊಸ ಬೆಳಕನ್ನು ತರಲಿ !


ನಿಮ್ಮ ಹೃದಯದಲ್ಲಿ ನನಗೆ ಜಾಗ ಕೊಡುವಿರಾ?

'ನಿಮಗೆ ಆನಂದ, ಶಾಂತಿ, ನೆಮ್ಮದಿಗಳೆಲ್ಲ ಬೇಕಲ್ಲವೇ ? ನಾನೀಗ ದೇಹಾತೀತನಾಗಿ ಹೋರಾಡುತ್ತಿರುವುದೂ ಅವುಗಳನ್ನು ಹಂಚಲೆಂದೇ. ನನಗಾಗಿ ಜಾಗ ತೆರವು ಮಾಡುವವರ ಹೃದಯಮಂದಿರವನ್ನು ಸೇರಿ ಆನಂದ, ಶಾಂತಿಗಳ ಅಕ್ಷಯಸ್ರೋತ ಹರಿಸುವ ದೇವದಾಸ ನಾನು. ನಿಮ್ಮ ತ್ಯಾಗ ಮತ್ತು ಸೇವೆಗಳೇ ನನ್ನನ್ನು ನಿಮ್ಮೆಡೆಗೆ ಬರಸೆಳೆವ ಮಿಳಿಗಳು. ಆದ್ದರಿಂದ ನನ್ನ ಕನಸಿನ ಆತ್ಮಶಕ್ತಿ ಜಾಗೃತಿ ಸಂಕೀರ್ಣ ಗ್ರೇಟರ್ ಡಿವೈನ್ ಪಾರ್ಕ್‌ನ ನಿರ್ಮಾಣಕ್ಕೆ ಉದಾರ ನೆರವು ನೀಡುವ ಔದಾರ್ಯ ತೋರಿ; ನನ್ನ ಮುಖವಾಣಿ 'ವಿವೇಕ ಸಂಪದ'ವನ್ನು ಅನೇಕರಿಗೆ ಹಂಚುವ ಮೂಲಕ ಜ್ಞಾನಯಾಗದ ಸೇವೆಗೈಯಿರಿ. ಆಗಲೇ ಓಡೋಡಿ ಬಂದು ನಿಮ್ಮೆದೆ ಗುಡಿಯಲ್ಲಿ ನೆಲೆಸಿ ನಿಮ್ಮನ್ನು ಸಾರ್ಥಕತೆಯೆಡೆಗೆ ಮುನ್ನಡೆಸುತ್ತ ಆನಂದ, ಶಾಂತಿಗಳನ್ನುಣಿಸುವ ನಿಮ್ಮ ನೆಂಟ ನಾನು, ಬಂಟ ನಾನು. ಅಂತಿರುವಾಗ ತ್ಯಾಗ, ಸೇವೆಗಳ ದೀಕ್ಷೆ ತೊಟ್ಟು ನನಗೆ ನಿಮ್ಮ ಹೃದಯದಲ್ಲಿ ಜಾಗ ಕೊಡುವಿರಾ ?'

● ಶ್ರೀ ಗುರೂಜೀ ದಾಸಾನುದಾಸ

ಕುದುರೆಮುಖ

ಆಡಳಿತ ನಿರ್ದೇಶಕ, ಡಿವೈನ್ ಪಾರ್ಕ್ ಟ್ರಸ್ಟ್ (ರಿ.)

# ವಿವೇಕ ಸಂಪದ




ಡಿವೈನ್ ಪಾರ್ಕ್ ಟ್ರಸ್ಟ್ (ರಿ.) ಪ್ರಕಟಿಸುವ
ವಿಶಿಷ್ಟ ಆಧ್ಯಾತ್ಮಿಕ ದ್ವೈಮಾಸಿಕ

ಸಂಪುಟ: 8, ಸಂಚಿಕೆ: 2

ಸಂಪಾದಕ ಸಂಪನ್ಮೂಲ

## ಶ್ರೀ ಗುರೂಜೀ

(ಸ್ವಾಮಿ ವಿವೇಕಾನಂದರ ಜಾಗೃತ ಚೇತನ)

ನಿರ್ವಾಹಕ ಸಂಪಾದಕ

ಡಾ। ಎ. ಚಂದ್ರಶೇಖರ ಉಡುಪ
B.Sc., M.B.B.S., F.A.G.E.




### — ಮುಖಪುಟದ ಅಂತರಾರ್ಥ —

"ಚೆಂಬಿಡದ ಕಷ್ಟನಷ್ಟಗಳ ಅಲೆಗಳುಳ್ಳ ಸಂಸಾರ ಸಾಗರದಲ್ಲಿ ಬಂಧಿಸುವ 9 ಮಂದಿ (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಅಹಂಕಾರ, ಮಮಕಾರ ಮತ್ತು ಸಂಶಯ) ಯ ಮಾಯೆಯಿಂದ ನರಳುವವರ ಒಳಗಣ್ಣನ್ನು 'ಉತ್ತಿಷ್ಠತ, ಜಾಗ್ರತ' (ಏಳಿ, ಎದ್ದೇಳಿ) ಎಂಬ ಅಭಯದಿಂದ ತೆರೆಯಿಸಿ, ಬೆಳೆಯಿಸುವ 12 ಮಂದಿ (ಪಂಚೇಂದ್ರಿಯ, ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳು) ಯಲ್ಲಿ ವಿವೇಕದ ಬೆಳಕನ್ನು ತುಂಬಿಸಿ ಆತ್ಮಶಕ್ತಿ ಜಾಗೃತಿಯಿಂದ ಹೃನ್ಮನಸಿಂಚನಗೈದು ಆ ದೇವರ ದಿವ್ಯ ದರುಶನ ಭಾಗ್ಯ ಕರುಣಿಸಿ ದೈವೀಗುಣಗಳ ಬೆಳೆಸಿನಿಂದ ಮನುಷ್ಯನನ್ನೇ ದೇವರಾಗಿಸುತ್ತ ಈ ಭೂಗ್ರಹವನ್ನೇ ದೈವಗ್ರಹವಾಗಿಸಲೋಸುಗ ಸ್ವಾಮಿ ವಿವೇಕಾನಂದನಾಗಿದ್ದ ನಾನೇ ಈಗ — ಗುರೂಜೀ ಆಗಿ, ನನ್ನೀ ಆಧ್ಯಾತ್ಮಿಕ ಪ್ರಯೋಗ ಶಾಲೆಯಾದ ಡಿವೈನ್ ಪಾರ್ಕ್‌ನಲ್ಲಿ ಹಗಲಿರುಳೂ ದುಡಿಯುತ್ತಿದ್ದೇನೆ. ನೀವು ಈ 'ವಿವೇಕ ಸಂಪದ'ದ ಸದ್ವಿಚಾರಗಳನ್ನು ಮೈಗೂಡಿಸಿಕೊಂಡು ಜೀವಂತ 'ವಿವೇಕ ಸಂಪದ'ವಾದಾಗಲೇ ಆ ದಿನ ಬೇಗ ಬಂದೀತು. ಆ ನಿಟ್ಟಿನಲ್ಲಿ ನೀವು ಬೇಗ ದೇವರಾಗಿ, ನಿಮ್ಮವರನ್ನು ದೇವರಾಗಿಸಿ ನನ್ನೀ ಹೋರಾಟಕ್ಕೆ ನೆರವಾಗುವಿರಿ ತಾನೇ?"




ಪ್ರಕಾಶನ
ವಿವೇಕ ಪ್ರಕಾಶನ, ಕೃಷ್ಣ ಕುಟೀರ
ಸಾಲಿಗ್ರಾಮ — 576 225, ದ.ಕ.
ದೂರವಾಣಿ: (08252) 64211, 64305

ಅಂಚೆ ಮೂಲಕ ಚಂದಾಹಣ
ವಾರ್ಷಿಕ: ರೂ. 40; ತ್ರೈವಾರ್ಷಿಕ: ರೂ. 100
ಆಜೀವ: ರೂ. 750
(ಮನಿಆರ್ಡರ್ ಮೂಲಕ ಮೇಲಿನ ವಿಳಾಸಕ್ಕೆ ಕಳುಹಿಸಿ)
ವಿದೇಶೀಯರಿಗೆ: ವಾರ್ಷಿಕ: ರೂ. 150; ಆಜೀವ: ರೂ. 5,000

ಕಲೆ — ವಿನ್ಯಾಸ
ಪ್ರಕೃತಿ ಚಿತ್ರಶಾಲೆ, ಆನಂದ, ಶಂಕರ, ಭಾಸ್ಕರ


# ಶ್ರೀ ಗುರೂಜೀ ಅಮೃತವಾಣಿ

ನಂಬಿ, ತುಂಬಿ, ಕಂಬಿ — ಈ ಶಬ್ದಗಳು ಸದಾ ನಿಮ್ಮ ಕಿವಿಯಲ್ಲಿ ಗುಯ್‌ಗುಡುತ್ತಿರಲಿ. ತಟ್ಟಿರಾಯನನ್ನು ಕುಣಿಸುವ ಮನುಷ್ಯನಂತೆ ಜೈವಿಕ ಕ್ರಿಯೆಗಳನ್ನೆಲ್ಲ ಸಾಂಗವಾಗಿಸುವ ದೇವರು ದೇಹದ ಪಂಜರದೊಳಗಿದ್ದಾನೆ ಎಂದು ನಂಬಿ, ಆನಂದ ಸಾಗರನೂ, ಶಾಂತಿಯ ಕಡಲೂ ಆದ ಆತನ ಕೃಪೆಯಿಂದ ಮಾತ್ರ ಆನಂದ, ಶಾಂತಿಗಳು ಪ್ರಾಪ್ತವಾಗುವುದರಿಂದ ಆನಂದ, ಶಾಂತಿಗಳಿಗಾಗಿ ಮನದಲ್ಲೆಲ್ಲ ಆತನ ಸ್ಮರಣೆಯನ್ನೇ ತುಂಬಿ, ಬೆಳಕು ಬರುತ್ತಲೇ ಕಾಲ್ಕೀಳುವ ಕತ್ತಲೆಯಂತೆ ಆಗ ಚಿಂತೆ, ಭಯ, ಚಾಂಚಲ್ಯಗಳೆಲ್ಲ ಎಣಿಸುವವು ಕಂಬಿ.

## ನವಂಬರ 1996ರಿಂದ ಜನವರಿ 1997, ವಿಶೇಷ ದಿನಗಳು

**ಡಿವೈನ್ ಪಾರ್ಕ್‌ನಲ್ಲಿ —**

| | |
|---|---|
| ನವಂಬರ 24, ರವಿವಾರ<br>ಬೆಳಗ್ಗೆ ಗಂಟೆ 10ರಿಂದ<br>ಸಂಜೆ 5ರ ತನಕ | ವಿವಿಧ ವಿವೇಕ ಜಾಗೃತ ಬಳಗಗಳ ಆಯ್ದ ನಿಷ್ಠ ಕಾರ್ಯಕರ್ತರ ಸಮಾವೇಶ ಮತ್ತು ಮುಂದಿನ ವರ್ಷದ ಕಾರ್ಯಕ್ರಮದ ಸಮೀಕ್ಷೆ. |
| ದಶಂಬರ 1, 29 ರವಿವಾರ<br>ಜನವರಿ 5, 26 ರವಿವಾರ | ಸಂಜೆ ಗಂಟೆ 4ರಿಂದ 6ರ ತನಕ ಶ್ರೀ ಗುರೂಜೀ ದಿವ್ಯ ಸಂದೇಶ ಸುಧೆ. |
| ದಶಂಬರ 15, ರವಿವಾರ<br>ಬೆಳಗ್ಗೆ ಗಂಟೆ 7ಕ್ಕೆ | ಸುಬ್ರಹ್ಮಣ್ಯ ಷಷ್ಠಿ — ಶ್ರೀ ವಾಸುಕೀ ದೇವರಿಗೆ ಮತ್ತು ಶ್ರೀ ಸುಬ್ರಹ್ಮಣ್ಯ ದೇವರಿಗೆ ವಿಶೇಷ ಪೂಜೆ. |

**ಹೊರಗಡೆಯಲ್ಲಿ —**

| | |
|---|---|
| ದಶಂಬರ 8, ರವಿವಾರ<br>ಬೆಳಗ್ಗೆ ಗಂಟೆ 10ರಿಂದ 12 | : ಬ್ರಹ್ಮಾವರ ಸಕ್ಕರೆ ಕಾರ್ಖಾನೆ ಬಳಿಯ ಆದರ್ಶನಗರದ ಶ್ರೀ ಬಿ. ಗಣಪಯ್ಯ ಸೋಮಯಾಜಿಯವರ ಮನೆ 'ಶ್ರೀ ಗುರುಚರಣ'ದಲ್ಲಿ ಶ್ರೀ ಗುರೂಜೀ ದಿವ್ಯ ಸಂದೇಶ ಸುಧೆ — 'ಭಕ್ತಿಯ ಶಕ್ತಿ' |
| ದಶಂಬರ 22, ರವಿವಾರ | : ಪಂಜ ಶ್ರೀ ಪರಿವಾರ ಪಂಚಲಿಂಗೇಶ್ವರ ದೇಗುಲ, ಸುಳ್ಯ — ಇಲ್ಲಿ ಒಂದು ದಿನದ ಸಾಧನಾಶಿಬಿರ ಮತ್ತು ಶ್ರೀ ಗುರೂಜೀ ದಿವ್ಯ ಸಂದೇಶ ಸುಧೆ — 'ಹೃದಯ ಪರಿವರ್ತನೆ' |
| ಜನವರಿ 14, ಮಂಗಳವಾರ<br>ಮಧ್ಯಾಹ್ನ ಗಂಟೆ 3ರಿಂದ 5 | : ಕ್ಯಾತನಹಳ್ಳಿಯ ಸ್ವಾಮಿ ವಿವೇಕಾನಂದ ಮಂದಿರದ ಉದ್ಘಾಟನೆ ಮತ್ತು ಮಾರ್ಗದರ್ಶನ. |
| ಜನವರಿ 15, ಬುಧವಾರ<br>ಬೆಳಗ್ಗೆ ಗಂಟೆ 10ರಿಂದ 12 | : ಕ್ಯಾತನಹಳ್ಳಿಯಲ್ಲಿ ಶ್ರೀ ಗುರೂಜೀ ದಿವ್ಯ ಸಂದೇಶ ಸುಧೆ — 'ದೇಗುಲದ ಮಹತ್ವ' ಮತ್ತು 'ವಿವೇಕ ಸಂಪದ' ಸಂಕ್ರಾಂತಿ ಸಂಚಿಕೆ ಬಿಡುಗಡೆ. |

## ವಿವೇಕಾಮೃತ ಸಿಂಚನ

### ಸಂಪದದ ಸೀಳ್ನೋಟ



### ● ಗಮನಿಸಿ ●

● ನೀವು ವಾರ್ಷಿಕ ಚಂದಾ (ರೂ. 40), ತ್ರೈವಾರ್ಷಿಕ ಚಂದಾ (ರೂ. 100) ಅಥವಾ ಆಜೀವ ಚಂದಾ (ರೂ. 750) ಹಣವನ್ನು ಮನಿಆರ್ಡರ್ ಅಥವಾ ಬ್ಯಾಂಕ್ ಡ್ರಾಫ್ಟ್ ಮೂಲಕ ವಿವೇಕ ಪ್ರಕಾಶನ, ಸಾಲಿಗ್ರಾಮ — 576 225, ಉಡುಪಿ ತಾಲೂಕು, ಕರ್ನಾಟಕ — ಈ ವಿಳಾಸಕ್ಕೆ ಕಳುಹಿಸಬೇಕು. ಚೆಕ್ ಮೂಲಕ ಹಣವನ್ನು ಕಳುಹಿಸುವುದಾದಲ್ಲಿ ರೂ. 10ನ್ನಾದರೂ ಜಾಸ್ತಿ ಸೇರಿಸಿರಬೇಕು.

● ಸಂಚಿಕೆ ಬಿಡುಗಡೆ ಆದ ತಿಂಗಳ 20ನೇ ತಾರೀಕಿನೊಳಗೆ ನಿಮ್ಮ ಕೈಸೇರುವಂತೆ ಪತ್ರಿಕೆಯನ್ನು ಅಂಚೆಯ ಮೂಲಕ ನಿಮಗೆ ಕಳುಹಿಸಲಾಗುವುದು. ಒಂದೊಮ್ಮೆ 20ನೇ ತಾರೀಕು ಕಳೆದರೂ ನಿಮಗೆ ಪತ್ರಿಕೆ ಸಿಗದಿದ್ದಲ್ಲಿ, ರಿಪ್ಲೈ ಕಾರ್ಡ್‌ನಲ್ಲಿ ಆ ವಿಚಾರವನ್ನು ಬರೆದು ನಮಗೆ ತಿಳಿಸಿರಿ.

ನಿಮ್ಮ ವಿಳಾಸದ ಚೀಟಿಯಲ್ಲಿ Dec. 96 ಅಥವಾ 12–96 ಎಂದು ನಮೂದಿಸಲ್ಪಟ್ಟಲ್ಲಿ
ಈ ಸಂಚಿಕೆಯೊಂದಿಗೇನೇ ನಿಮ್ಮ ಚಂದಾದಾರಿಕೆ ಮುಗಿಯುತ್ತದೆ.
ದಯಮಾಡಿ ರೂ. 40ನ್ನು ಮನಿ ಆರ್ಡರ್ ಮಾಡಿ ಚಂದಾ ನವೀಕರಿಸಿ.

# ಒಲವಿನ ಔದಾರ್ಯ–ಕ್ಷಮೆ

ಇಲೆಕ್ಟ್ರಿಕ್ ಬಿಲ್‌ನ ಹಣ ಕಟ್ಟದಿದ್ದರೆ ವಿದ್ಯುತ್ ಪೂರೈಕೆಯನ್ನೇ ನಿಲ್ಲಿಸಿ ಬಿಡುವಂತೆ, ಆ ದೇವರು ಎಂದಾದರೂ ತನ್ನನ್ನು ನೆನೆಯದಿದ್ದವರನ್ನು ತಕ್ಷಣ ಸಾಯಿಸಿಬಿಡುವನೇನು? ಅದೆಷ್ಟು ತಪ್ಪುಗಳನ್ನು ಗೈದರೂ ಆ ದೇವರು ಅವುಗಳನ್ನೆಲ್ಲ ನಿರ್ಲಕ್ಷಿಸಿ ಎಲ್ಲರನ್ನೂ ಬದುಕಿಸುತ್ತಿರುವುದರಿಂದಲೇ ಎಲ್ಲರ ಜೀವನಲೀಲೆ ಸಾಗುತ್ತಿದೆ. ಕೆಡುಕನ್ನು ಕಡೆಗಣಿಸಿ ಒಳಿತನ್ನೇ ಹಾರೈಸುವ ಈ ಪ್ರೀತಿಯ ಔದಾರ್ಯವೇ ಕ್ಷಮೆ. ಪ್ರೀತಿ, ತಾಳ್ಮೆಗಳ ನೆಲೆಯಲ್ಲಿ ಅಂಕುರಿಸುವ ಈ ಕ್ಷಮೆಯೇ ವಿಶೇಷ ದೈವಕೃಪೆಗೆ ಸಾಧಕ; ಕರ್ತವ್ಯಪರತೆ, ನಿಸ್ವಾರ್ಥತೆಗಳಿಗೆ ಪ್ರೇರಕ.



ಗುಡ್ಡ-ಬೆಟ್ಟ, ನದಿ-ತೊರೆ, ಸಾಗರ-ಸರೋವರ, ಕಾಡು-ಮೇಡುಗಳನ್ನೆಲ್ಲ ಧರಿಸಿರುವುದರಿಂದ ಭೂಮಿಯನ್ನು ಧರಣಿ, ಧರಿತ್ರೀ ಎನ್ನುತ್ತಾರೆ. ಪ್ರಾಣಿ, ಪಕ್ಷಿಗಳೇ ಮೊದಲಾದ ಜೀವಜಗತ್ತನ್ನೇ ಹೊತ್ತಿರುವುದರಿಂದ ಅದನ್ನು ವಿಶ್ವಂಭರಾ ಎನ್ನುತ್ತಾರೆ. ಎಲ್ಲ ಬಗೆಯ ಮುತ್ತು-ರತ್ನ-ವಜ್ರ-ವೈಢೂರ್ಯಗಳೇ ಮೊದಲಾದ ಸಂಪತ್ತಿನ ಆಗರವಾದುದರಿಂದ ಅದು ವಸುಂಧರಾವೂ ಹೌದು. ಜೀವಿಗಳು ಉಂಟುಮಾಡುವ ಬಗೆಬಗೆಯ ಕ್ರಿಯೆ, ಪ್ರಕ್ರಿಯೆಗಳಿಗೆಲ್ಲ ಮೈಯೊಡ್ಡಿ ಅವನ್ನು ಸಹಿಸಿಕೊಂಡಿರುವುದರಿಂದ ಅದು ಸರ್ವಂಸಹಾ ಎನಿಸಿದೆ. ಯಾರು ಏನೇ ಮಾಡಲಿ, ಅವರಿಗೆ ಒಳಿತಾಗಲೆಂದೇ ಅದು ವರ್ತಿಸುತ್ತ ಬಂದಿರುವುದರಿಂದ ಅದನ್ನು ಕ್ಷಮಾ ಎಂದೂ ಕರೆಯುತ್ತಾರೆ. ಹೀಗೆ ಕ್ಷಮೆಗೆ ಮಹಾನಿದರ್ಶನ ನಾವು ವಾಸಿಸುವ ಭೂಮಿಯೇ.

## ಶೂನ್ಯತೆಯ ಗಾನ, ಪಾನ

ಸಂತರೊಬ್ಬರು ನದಿನೀರಿನಲ್ಲಿ ಕಾಲ್ತೊಳೆದುಕೊಳ್ಳುತ್ತಿದ್ದರು. ಚೇಳೊಂದು ಆ ನದಿ ನೀರಿನಲ್ಲಿ ಮುಳುಗುತ್ತಿರುವುದು ಅವರ ಕಣ್ಣಿಗೆ ಬಿತ್ತು. ಅದನ್ನು ಬದುಕಿಸಲೆಂದೇ ಅವರು ಅದನ್ನೆತ್ತಿ ಅಲ್ಲಿದ್ದ ಬಂಡೆಯ ಮೇಲೆ ಹಾಕಿದರು. ತನ್ನನ್ನು ಬದುಕಿಸುತ್ತಿದ್ದಾರೆಂಬುದನ್ನೂ ತಿಳಿಯದೆ ಆ ಚೇಳು ಅವರ ಕೈಯನ್ನೇ ಕುಟುಕಿತು. ಆ ಬಂಡೆಯ ಮೇಲೆ ಓಡಾಡುತ್ತ ಜಾರಿ ಪುನಃ ನೀರಿಗೇ ಬಿತ್ತು. ಆಗಲೂ ಆ ಸಂತರದನ್ನು ಪುನಃ ಎತ್ತಿ ಹಾಕಲು ಕೈಚಾಚಿದರು. ಅದು ಕಚ್ಚಿದರೂ ಲೆಕ್ಕಿಸದೆ ಅದನ್ನೆತ್ತಿ ದಡದ ಮೇಲೆ ಹಾಕಿದರು. ಆಗ ಬಳಿಯಲ್ಲಿದ್ದ ಭಕ್ತರೊಬ್ಬರು ಅವರೊಡನೆ ಕೇಳಿದರು–'ಆ ಚೇಳು ಕುಟುಕಿದರೂ ಅದನ್ನೆತ್ತಿ ಹಾಕಿದ್ದೇಕೆ ನೀವು?' ಎಂದು. ಅದಕ್ಕೆ 'ಕುಟುಕುವುದು ಅದರ ಧರ್ಮ, ಎತ್ತಿ ಹಾಕುವುದು ನನ್ನ ಧರ್ಮ' ಎಂದರಂತೆ ಆ ಸಂತರು. ಅವರಲ್ಲಿ ಮನೆ ಮಾಡಿದ್ದ ಕೆಡುಕನ್ನು ಲೆಕ್ಕಿಸದೆ ಒಳಿತು ಮಾಡಬೇಕೆಂಬ ಆ ತುಡಿತವೇ ಕ್ಷಮೆ. ಮಹಾತ್ಮರೆಲ್ಲರ ಮಹಾತ್ಮ್ಯೆಗೆ ಕಾರಣವೇ ಈ ಕ್ಷಮೆ.

ಆ ದೇವರು ಕ್ಷಮೆಯ ಕಡಲು. ಒಳಗಿರುವ ಮನುಷ್ಯನಿಂದಾಗಿ ತಟ್ಟೀರಾಯನಿಗೆ ಕುಣಿಯಲಾಗುವಂತೆ, ಎಲ್ಲರ ದೇಹದೊಳಗಿದ್ದು ಜೈವಿಕ ಕ್ರಿಯೆಗಳನ್ನು ನಡೆಸುವ ದೇವರಿಂದಾಗಿ ಎಲ್ಲರ ಜೀವನ ಲೀಲೆ ಸಾಂಗವಾಗುತ್ತಿದೆ. ಮುದ್ದು ಕಂದನ ಮೇಲಿನ ಅತಿಶಯ ಪ್ರೀತಿಯಿಂದಾಗಿ ಆತತ ದೋಷ, ದೌರ್ಬಲ್ಯಗಳನ್ನೆಲ್ಲ ಕಡೆಗಣಿಸಿ ಆತನಿಗೆ ಒಳಿತಾಗಬೇಕೆಂಬ ಒಂದೇ ತುಡಿತದಿಂದ ಆತನ ಪೀಡೆಗಳನ್ನೂ ಲೆಕ್ಕಿಸದೆ ಸೇವೆಗೈಯುವ ವಾತ್ಸಲ್ಯಮಯಿ ತಾಯಿಯಂತೆ, ಆ ದೇವರೂ ವ್ಯಕ್ತಿ ಚೆನ್ನಾಗಿ ಬದುಕುವುದನ್ನು ನೋಡಬೇಕೆಂದೇ ಆತನ ಕುಕರ್ಮ–ಕುಚೇಷ್ಟೆಗಳನ್ನೆಲ್ಲ ನಿರ್ಲಕ್ಷಿಸಿ ಆತನನ್ನು ಬದುಕಿಸುತ್ತಾನೆ, ವ್ಯಕ್ತಿ ಬೇಕೆಂದೇ ತನ್ನ ಕೈಗೆ ಗಾಯ ಮಾಡಿಕೊಂಡರೂ ಆ ದೇವರು ಆ ಗಾಯದ ರಿಪೇರಿ ಮಾಡುತ್ತಾನೆ.

ಅನ್ನದ ಜೊತೆ ಕಲ್ಲು ತಿಂದರೂ, ದೇಹಕ್ಕೇನೂ ಅಪಾಯವಾಗದಂತೆ ಆ ಕಲ್ಲನ್ನು ಹೊರಸಾಗಿಸುತ್ತಾನೆ. ಧೂಮಪಾನಾದಿ ದುಶ್ಚಟಗಳ ಮೂಲಕ ಶ್ವಾಸಕೋಶಾದಿ ಅಂಗಗಳನ್ನೇ ಸುಟ್ಟು ಹಿಂಸಿಸಿದರೂ ಆ ದೇವರು ಉಸಿರಾಟಾದಿ ಕ್ರಿಯೆಗಳನ್ನು ನಿಲ್ಲಿಸನು. ನಿಮ್ಮ ಮೇಲೆ ಆತನಿಗಿರುವ ಅಪಾರ ಪ್ರೀತಿಯ ಭಾವದಿಂದಾಗಿ ನಿಮ್ಮ ಕೆಡಕುಗಳೆಲ್ಲ ನಗಣ್ಯ ಎಂದೇ ಎಣಿಸಿ, 'ನನ್ನ ಕಂದ ಇಂದೀಗ ಅಜ್ಞಾನದಿಂದ ಈ ಕಾರ್ಯವೆಸಗಿದರೂ ನಾಳೆ ಸುಜ್ಞಾನದಿಂದ ಶಿಷ್ಟನಾಗುತ್ತಾನೆ' ಎಂಬ ಭರವಸೆಯ ಭಾವ ಪ್ರಚೋದಿತನಾಗಿ ನಿಮ್ಮನ್ನು ಬದುಕಿಸುತ್ತಲೇ ಇದ್ದಾನೆ. ಆತ ನಿಮ್ಮ ಮೇಲೆ ತೋರುವ ಔದಾರ್ಯವನ್ನು ನೀವು ಇತರರ ಮೇಲೆ ತೋರಬೇಕೆಂಬುದೇ ಆತನ ಇಂಗಿತ. ನಿಮಗೆ ತನ್ನ

ಕ್ಷಮೆ ಇದ್ದಲ್ಲಿ ಯಾರೂ ಪರಕೀಯರು, ಕೇಡುಗರು, ದೋಷಿಗಳು, ದ್ವೇಷಿಗಳು ಎಂದೆನಿಸದು. ಹಳದಿ ಬಣ್ಣದ ಕನ್ನಡಕ ಧರಿಸಿದವರಿಗೆ ಜಗತ್ತೆಲ್ಲ ಹಳದಿ ಆಗಿ ಕಾಣುವಂತೆ, ಕ್ಷಮೆಯನ್ನು ಮೈಗೂಡಿಸಿಕೊಂಡಾಗ 'ಎಲ್ಲರೂ ನಮ್ಮವರೇ' ಎಂದು ತೋರುತ್ತದೆ. ಅವರ ದೋಷ ದೌರ್ಬಲ್ಯ, ಕೇಡು ಕೆಡಕುಗಳಿಗೆಲ್ಲವಕ್ಕೂ ಕಣ್ಣು ಕುರುಡಾಗುತ್ತದೆ. ಅವರಲ್ಲಿ ಕ್ಷಮೆಯ ಕಡಲಾದ ಆ ದೇವರಿದ್ದಾನೆ, ಆತ ದೋಷಗಳ ಗಣಿಯಾದ ತನ್ನನ್ನು ಬದುಕಿಸುತ್ತಿರುವುದಕ್ಕೆ ಪ್ರತಿಯಾಗಿ ಅವರಿವರಲ್ಲಿರುವ ದೋಷಗಳನ್ನು ಪರಿಗಣಿಸದೆ ಅವರಿವರಲ್ಲಿರುವ ದೇವರ ಸೇವೆಯನ್ನು ತಾನು ಗೈಯಬೇಕು ಎಂಬೊಂದು ತುಡಿತವೇ ಅವರ ಹೃದಯದಲ್ಲಿ ಮಿಡಿಯುತ್ತದೆ. ಅದೇ ಸೌಜನ್ಯವಾಗಿ, ಮಾನವೀಯತೆಯಾಗಿ




# ಕ್ಷಮೆಯಿರುವ ಹೃದಯದ ಮಿಡಿತ – 'ಯಾರೇ ಇರಲಿ, ಏನೇ ಬರಲಿ, ಎಂದೆಂದಿಗೂ ಒಳಿತೇ ಆಗಲಿ!'

**ಪ್ರೀತಿ-ತಾಳ್ಮೆ, ಅವಗಣನೆ, ಔದಾರ್ಯ, ಶುಭಾಕಾಂಕ್ಷೆ, ಭರವಸೆ, ನಯ-ನಲಿವುಗಳ ಸಂಗಮವಾದ ಕ್ಷಮೆಯಿಂದಲೇ ಕೃಪೆಯ ಆಗಮ, ಆನಂದದ ಉಗಮ.**

ತನ್ನನ್ನೇ ಕಡಿಯುವ ಕೊಡಲಿಯನ್ನೂ ಸುಗಂಧಮಯವಾಗಿಸುವ ಶ್ರೀಗಂಧದಂತೆ ಕ್ಷಮಾಶೀಲರ ಸ್ವಭಾವ. ತಮಗೆ ಈ ತನಕ ತೊಂದರೆ ಕೊಟ್ಟವರೇ ಬರಲಿ, ಅವರು ಎಂಥ ನೀಚರೇ ಆಗಿರಲಿ, ಅವರ ಕೆಡುಕನ್ನೆಲ್ಲ ಕಡೆಗಣಿಸಿ ಹಿಂದಿನ ಕಹಿ ಘಟನೆಗಳನ್ನೆಲ್ಲ ಮರೆತು, ಅವರ ಒಳಿತನ್ನೇ ಬಯಸಿ ನಗುನಗುತ್ತ ಅವರಿಗೆ-ಅವರೊಳಗಿನ ದೇವರಿಗೆ, ನೆರವಾಗುವುದು ಅಂಥವರ ಜಾಯಮಾನ.



ಈ ಹಿಂದೆ ಏನೇನೂ ಆಗಿಲ್ಲವೆಂಬಂತೆ ನಿರ್ವಿಕಲ್ಪ ಚಿತ್ತದಿಂದ, ಒಲವಿನ ತುಡಿತದಿಂದ ಹರಿಸುವ ಈ ಶುಭಾಕಾಂಕ್ಷೆಯ ಉದಾರತೆ ದೈವೀಗುಣಗಳಲ್ಲೇ ಶಿಖರಪ್ರಾಯವಾದುದು. ಆದ್ದರಿಂದ ಕ್ಷಮೆ ಮೈಗೂಡಿದಾಗ ವ್ಯಕ್ತಿಯಲ್ಲಿ ಹೆಚ್ಚು ದೈವಿಕತೆ ಎದ್ದು ಕಾಣುತ್ತದೆ. ಹೆಚ್ಚು ದೈವಕೃಪೆ ಒಲಿದು ಬರುತ್ತದೆ. ಕ್ಷಮಾಶೀಲನ ಹೃದಯವೇ ಆ ದೇವರ ನೆಲೆಯಾಗಿ ಆನಂದ, ಶಾಂತಿಗಳ ಬೀಡಾಗುತ್ತದೆ.

ಆ ಇಂಗಿತನವನ್ನು ಕಣ್ಣಿಗೆ ಕಟ್ಟಿಸಿ ಮನದಟ್ಟಾಗಿಸಬೇಕೆಂದೇ ತನ್ನ ಪ್ರತಿನಿಧಿಗಳಾದ ಗಾಳಿ, ನೀರು, ಬೆಳಕುಗಳಿರುವ ಪ್ರಕೃತಿಯಲ್ಲಿ ಆತ ತನ್ನ ಆ ಗುಣವನ್ನೇ ಹಾಸುಹೊಕ್ಕಾಗಿಸಿದ್ದಾನೆ. ಜೀವರಾಶಿಗಳ ಭಾರವನ್ನೂ, ಕಡಿದು ಕೊಚ್ಚಿ, ಬಾವಿ ಕೊರೆದು, ಗನಿ ತೋಡಿ ಮಾನವ ಗೈಯುವ ಅಪಚಾರವನ್ನೂ ಅಸಹಕಾರ, ಮುಷ್ಕರಗಳೇ ಮೊದಲಾದ ಪ್ರತಿಭಟನೆಯ ಸೊಲ್ಲಿಲ್ಲದೆ ಸಹಿಸಿಕೊಂಡು ಭೂಮಿ ಮಾನವನ ಬದುಕಿಗೆ ನೆರವಾಗುತ್ತಲೇ ಬಂದಿದೆ. ಗಾಳಿಯನ್ನು ಮಲಿನಗೊಳಿಸಿದರೆ ಆ ಗಾಳಿ ಬೇಸರದಿಂದ ತನ್ನನ್ನು ಮಲಿನಗೊಳಿಸಿದವರ ಜೀವಕ್ಕೆ ಎರವಾಗದು. ಮರುಕ್ಷಣವೇ ಆ ಮಾಲಿನ್ಯವನ್ನು ದೂರ ಸರಿಸಿ ಉಸಿರಾಟಕ್ಕೆ ನೆರವಾಗುತ್ತದೆ. ನದಿಯ ನೀರು, ಬೆಳಗುವ ಸೂರ್ಯರ ಧೋರಣೆಗಳ ಧಾಟಿಯೂ ಇದೇನೇ. ಕೊಲೆಗಾರ. ಕಟುಕ ಎಂದು ನದಿನೀರು ಬತ್ತಿ ಹೋಗದು, ಸೂರ್ಯನ ಬೆಳಕು ಕಂದಿ ಹೋಗದು. ಅವೆಲ್ಲ ಗುಣೈಕ ಪಕ್ಷಪಾತಿಗಳು. ಆ ದೇವರು ಎಲ್ಲರಲ್ಲೂ ಇರುವುದರಿಂದ ಆ ದೇವರ ಸೇವೆಯನ್ನೇ ಗೈಯುತ್ತಿದ್ದೇವೆಂಬ ಔದಾರ್ಯದ ಧನ್ಯತೆ ಅವೆಲ್ಲವುಗಳದ್ದು, ಆ ಔದಾರ್ಯದ ಧನ್ಯತೆ ಅಥವಾ 'ನಾವೇನೂ ಅಲ್ಲ, ಆತನದೇ ಎಲ್ಲ. ಆತನಿರುವ ಯಾರನ್ನೂ ಕಡೆಗಣಿಸುವುದು ಸಲ್ಲ' ಎಂಬ 'ಸೊನ್ನೆ' ಭಾವದ ಭವ್ಯತೆಯನ್ನೇ ಕ್ಷಮೆ ಎನ್ನುವುದು.

ಎಲ್ಲರನ್ನೂ ತಬ್ಬುತ್ತದೆ, ಎಲ್ಲರ ಬದುಕಿನಲ್ಲೂ ಭರವಸೆಯ ಬೆಳಕನ್ನು ತುಂಬಿ ಹೊಸತನದ ಉಲ್ಲಾಸದಿಂದ ಬದುಕಲು ಪ್ರೇರಿಸುತ್ತದೆ. ಕ್ಷಮಾಭಿಕ್ಷೆ ಅಥವಾ ಕ್ಷಮಾದಾನ ಎಂಬುದು ಹೀಗೆ ಅದೆಷ್ಟೋ ಬಾರಿ ಹೊಸಜನ್ಮದಾನವನ್ನೇ ಮಾಡಿ, ವ್ಯಕ್ತಿಯ ಬಾಳಿನಲ್ಲಿ ಹೊಸ ಅಧ್ಯಾಯಕ್ಕೇ ನಾಂದಿ ಹಾಡುತ್ತದೆ. ಆದ್ದರಿಂದ ಕ್ಷಮೆಯು ಹೊಸ ಬದುಕಿಗೊಂದು ಮುಕ್ತ ಅವಕಾಶವೂ ಹೌದು.

'ಈ ಕ್ಷಮೆಯಲ್ಲಿ 'ನೀನು ಬೇಕು' ಎಂಬ ಪ್ರೀತಿಯ ತುಡಿತವೂ ಇದೆ; 'ಆ ದೇವರೇ ನೋಡಿಕೊಳ್ಳುತ್ತಾನೆ' ಎಂಬ ತಾಳ್ಮೆಯ ಮಿಡಿತವೂ ಇದೆ. ಅದು ವ್ಯಕ್ತಿಯ ಕೆಡುಕುಗಳನ್ನೆಲ್ಲ ನಿರ್ಲಕ್ಷಿಸುವ ಅಥವಾ ಮರೆಯುವ ಅವಗಣನೆಯೂ ಹೌದು; ಅಜ್ಞಾನ ಅಹಂಕಾರದ ಕಿಲುಬು ಹಿಡಿದು ವ್ಯಕ್ತಿಯಿಂದ ದೋಷಗಳಾಗಿದ್ದರೂ, ವ್ಯಕ್ತಿಯಲ್ಲಿರುವ ಅಭಿಜಾತ ದೈವಿಕತೆಗೆ ಸಲ್ಲಿಸುವ ಮನ್ನಣೆಯ ಔದಾರ್ಯವೂ ಹೌದು. ಅದರಲ್ಲಿ ವ್ಯಕ್ತಿಗೆ ಒಳಿತಾಗಬೇಕೆಂಬ ಶುಭಾಕಾಂಕ್ಷೆಯೂ ಇದೆ, ರಾತ್ರಿ ಕಳೆದು ಬೆಳಗು ಬರುವಂತೆ ವ್ಯಕ್ತಿಗೆ ಇನ್ನಾದರೂ ಜ್ಞಾನೋದಯವಾಗಿ ಆತ ಇನ್ನಾದರೂ ಬಾಳನ್ನು ಬೆಳಗಿಸಿಕೊಳ್ಳುವನೆಂಬ ಭರವಸೆಯ ಧ್ವನಿಯೂ ಇದೆ. 'ಕಸ'ವನ್ನು ಕಡೆಗಣಿಸಿ 'ರಸ' ಸಾಗರನಾದ ಆ ದೇವರ ನೆನಕೆಯಲ್ಲೇ ನಡೆಯುವ ಈ ಕ್ಷಮಿಸುವ ಕ್ರಿಯೆಯಲ್ಲಿ ನಯ, ನಗೆ, ನಲಿವುಗಳೆಲ್ಲವೂ ಮೇಳೈಸಿವೆ. ಆದ್ದರಿಂದ ಕ್ಷಮೆ ಎಂಬುದು ಪ್ರೀತಿ ತಾಳ್ಮೆ, ಅವಗಣನೆ,

ಔದಾರ್ಯ, ಶುಭಾಕಾಂಕ್ಷೆ, ಭರವಸೆ, ನಯ–ನಲಿವುಗಳೆಲ್ಲವುಗಳ ರಸಗಟ್ಟಿ. ಅಂತರಂಗ ವಿಕಾಸದ ಪಕ್ವಫಲವಾಗಿ ಅರಳುವ ಮಹಾಗುಣ ಅದು. ದೈವೀ ಗುಣಗಳ ರಿಲೇ ಓಟದಲ್ಲಿ ಪ್ರೀತಿ, ತಾಳ್ಮೆಗಳ ಸುತ್ತಿಗಿಂತಲೂ, ಕ್ಷಮೆಯ ಸುತ್ತನ್ನು ಯಶಸ್ವಿಯಾಗಿ ಓಡಿ ಮುಗಿಸುವುದು ಕಷ್ಟ. ಆದ್ದರಿಂದಲೇ ಅದನ್ನೋಡಿ ಮುಗಿಸಿದರೆ ವಿಶೇಷಕೃಪೆಯ ಬಹುಮಾನ ಲಭಿಸುತ್ತದೆ. ಪ್ರೀತಿ, ತಾಳ್ಮೆ, ಕರ್ತವ್ಯಪರತೆ, ನಿಸ್ವಾರ್ಥತೆಗಳಿಗೆ ಕ್ರಮವಾಗಿ 20%, 15%, 10%, 5% ಅಂಕಗಳು ಪ್ರಾಪ್ತವಾದರೆ ಈ ಕ್ಷಮೆಗೆ ಅವೆಲ್ಲವುಗಳ ಮೊತ್ತದಷ್ಟು ಅಂದರೆ 50% ನಗುವಿನಲ್ಲದು ಪ್ರತಿಬಿಂಬಿತವಾಗುತ್ತದೆ. ಕ್ಷಮೆ ಎಂಬುದು ಚಿಕ್ಕಮಕ್ಕಳ ಹುಟ್ಟುಗುಣವೇ ಆಗಿರುತ್ತದೆ. ಆ ಮಕ್ಕಳಿಗೆ ಕೇಡು ಮಾಡಿದರೆ ಮರುಕ್ಷಣವೇ ಅವರದನ್ನು ಮರೆಯುತ್ತವೆ. ಕೇಡುಮಾಡಿದವರ ಮೇಲೆ ಸೇಡು ತೀರಿಸಿಕೊಳ್ಳಲವು ಹೊಂಚುಹಾಕವು. ತಮಗೆ ಕೇಡು ಮಾಡಿದವರನ್ನು ಅವು ಪ್ರೀತಿಸುತ್ತವೆ. ಆದರೆ ಹಿರಿಯರೇ 'ಕೇಡು ಮಾಡಿದವರನ್ನು ದೂರ ಮಾಡಬೇಕು, ದ್ವೇಷಿಸಬೇಕು' ಎಂದು ಚಿಕ್ಕಮಕ್ಕಳಿಗೆ ಕಲಿಸಿ ಆ ಮಕ್ಕಳ ಮನಸ್ಸಿನ ಕ್ಷಮೆಯನ್ನು ಕರಟಿಸಿ ಬಿಡುತ್ತಾರೆ. ಅದರಿಂದಾಗಿ ಬೆಳೆಯುತ್ತ ಬಂದಂತೆ ಇನ್ನೊಬ್ಬ

# ಕ್ಷಮೆಯ ಕಡಲು–ಯೇಸುಕ್ರಿಸ್ತ

ಯಾರನ್ನು ಆತ ಪ್ರೀತಿಯಿಂದ ಕಂಡಿದ್ದನೋ ಅವರೇ ಆವನಿಗೆ ಮುಳ್ಳಿನ ಕಿರೀಟ ತೊಡಿಸಿದರು; ಮುಳ್ಳಿನಿಂದ ಚುಚ್ಚಿದರು, ಚಚ್ಚಿದರು. ಕಟ್ಟಕಡೆಗೆ ಕೈಕಾಲುಗಳಿಗೆ ಮೊಳೆ ಹೊಡೆದು ಶಿಲುಬೆಗೇರಿಸಿದರು. ಆಗಲೂ ಆತನ ಬಾಯಿಯಿಂದ ಆ ಹಿಂಸಕರ ಬಗ್ಗೆ ನಿಂದೆಭರ್ತ್ಸನೆ, ಕೋಪ ದ್ವೇಷಗಳ ನುಡಿ ಬರಲಿಲ್ಲ. ಆತನ ಕೊನೆಯ ಉದ್ಗಾರ ಏನು ಗೊತ್ತೇ? 'ಅಯ್ಯೋ, ತಿಳಿಯದೆ ತಪ್ಪು ಮಾಡುತ್ತಿರುವ ನನ್ನೀ ಸೋದರರನ್ನು ಕ್ಷಮಿಸು ತಂದೆ!' ಎಂದೇ ಆಗಿತ್ತು. ಕ್ಷಮೆಯೇ ಮೈವೆತ್ತಿದಂತಿದ್ದ ಆ ಮಹಾತ್ಮನೇ ಯೇಸುಕ್ರಿಸ್ತ.






'ನನ್ನ ವಿರೋಧಿಯಾಗಿ ನನಗೇ ದ್ರೋಹ ಬಗೆಯುವ ನನ್ನ ಸೋದರರನ್ನು ಎಷ್ಟು ಸಲ ಕ್ಷಮಿಸಬೇಕು? ಏಳು ಸಲವೇ?' ಎಂಬ ಪ್ರಶ್ನೆಗೆ ಆತ 'ಏಳು ಸಲ ಅಲ್ಲ, ಏಳೆಪ್ಪತ್ತು ಸಲ ಕ್ಷಮಿಸಬೇಕು' ಎಂದಿದ್ದ. 'ಯಾರ ಬಗ್ಗೆಯೇ ಆಗಲಿ ನಿಮ್ಮ ಮನದಲ್ಲಿ ಅಸಮಾಧಾನವಿದ್ದರೆ ಅದನ್ನು ಬೆಳೆಸಬೇಡಿ. ಪ್ರಾರ್ಥನೆ ಮಾಡುವಾಗ ಆ ತಂದೆಯೊಡನೆ ಮೊರೆಯಿಟ್ಟು ಆ ಅಸಮಾಧಾನಕ್ಕೆ ಕಾರಣರಾದವರನ್ನು ಕ್ಷಮಿಸಿ ಬಿಡಿ. ಆಗ ಸ್ವರ್ಗದಲ್ಲಿರುವ ನಿಮ್ಮ ತಂದೆಯೂ ನಿಮ್ಮ ತಪ್ಪುಗಳನ್ನು ಕ್ಷಮಿಸುತ್ತಾನೆ.'

'ಬಲಿಪೀಠದ ಮುಂದೆ ದೇವರಿಗೆ ಕಾಣಿಕೆಯನ್ನು ಅರ್ಪಿಸಲಿರುವಾಗ ನಿನ್ನ ಸೋದರರೊಡನೆ ಆ ದೇವರು ಮೆಚ್ಚುವ ರೀತಿಯಲ್ಲಿ ನೀನು ವರ್ತಿಸಿರುವಿಯೇ ಎಂದು ವಿಮರ್ಶಿಸಿಕೋ. ಯಾರಾದರೊಬ್ಬ ಸೋದರನೊಡನೆ ನಿನಗೇನಾದರೂ ಮನಸ್ತಾಪವಿರುವುದು ಆಗ ನೆನಪಿಗೆ ಬಂದರೆ, ಆ ನಿನ್ನ ಕಾಣಿಕೆಯನ್ನು ಅಲ್ಲೇ ಬಿಟ್ಟು, ಆ ನಿನ್ನ ಸೋದರನ ಬಳಿ ಸಾರಿ ಮೊದಲು ಆ ವೈಮನಸ್ಸನ್ನು ಬಗೆಹರಿಸಿಕೋ. ಆ ಮೇಲೇನೇ ಬಂದು ನಿನ್ನ ಕಾಣಿಕೆಯನ್ನರ್ಪಿಸು. ಆಗ ಮಾತ್ರ ದೇವರದನ್ನು ಸ್ವೀಕರಿಸುತ್ತಾನೆ.

'ನಿಮ್ಮ ಶತ್ರುಗಳನ್ನು ಪ್ರೀತಿಸಿರಿ. ನಿಮ್ಮನ್ನು ದ್ವೇಷಿಸುವವರನ್ನು ಸತ್ಕರಿಸಿರಿ. ನಿಮ್ಮನ್ನು ಶಪಿಸುವವರನ್ನು ಆಶೀರ್ವದಿಸಿರಿ. ನಿಮ್ಮನ್ನು ನಿಂದಿಸುವವರಿಗಾಗಿ ಪ್ರಾರ್ಥಿಸಿರಿ. ಒಂದು ಕೆನ್ನೆಗೆ ಹೊಡೆದವನಿಗೆ ಇನ್ನೊಂದು ಕೆನ್ನೆಯನ್ನೂ ನೀಡಿರಿ. ಮೇಲಂಗಿ ಕಿತ್ತುಕೊಳ್ಳುವವನಿಗೆ ಒಳಅಂಗಿಯನ್ನೂ ಕೊಡಿರಿ.'

'ನಿಮ್ಮನ್ನು ಪ್ರೀತಿಸುವವರನ್ನು ಪ್ರೀತಿಸುವುದೂ, ನಿಮಗೆ ಉಪಕಾರ ಮಾಡುವವರಿಗೆ ಉಪಕಾರ ಮಾಡುವುದೂ ದೊಡ್ಡದಲ್ಲ. ಪಾಪಿಷ್ಠರೂ ಅದನ್ನು ಮಾಡಬಲ್ಲರು. ಸ್ವರ್ಗದಲ್ಲಿರುವ ತಂದೆಯ ಒಲುಮೆ ಗಳಿಸಲು ನಿಮ್ಮನ್ನು ಪ್ರೀತಿಸದವರನ್ನೂ ನೀವು ಪ್ರೀತಿಸಬೇಕು. ನಿಮಗೆ ಅಪಕಾರ ಮಾಡಿದವರಿಗೂ ಉಪಕಾರ ಮಾಡಬೇಕು. ದೇವರು ದುರ್ಜನರನ್ನೂ, ಕೃತಘ್ನರನ್ನೂ ಪ್ರೀತಿಸುವುದರಿಂದಲೇ ಅವರನ್ನು ಬದುಕಿಸುತ್ತಿದ್ದಾನೆ. ನಿಮ್ಮ ತಂದೆಯಾದ ಆ ದೇವರಂತೆ ನೀವೂ ಕ್ಷಮಾಶೀಲರಾಗಿ.'

ಕ್ಷಮೆಯೇ ಎರಕ ಹೊಯ್ದಂಥ ಈ ನುಡಿಮುತ್ತುಗಳೆಲ್ಲ ಮಹಾತ್ಮ ಯೇಸುಕ್ರಿಸ್ತನವೇ. ಅವನ ಹೆಸರಿನಲ್ಲಿ ಉರಿಸುವ ಮೊಂಬತ್ತಿ, ಬೆಳಗಿಸುವ ನಕ್ಷತ್ರಗಳ ಸಂದೇಶವೂ ಬಾಳೆಲ್ಲ ಕ್ಷಮೆಯ ಬೆಳಕನ್ನು ಬೀರಬೇಕೆಂದೇ ಆಗಿದೆ. ನಿಜವಾಗಿಯೂ ಕ್ರಿಸ್‌ಮಸ್ ಎಂಬುದು ಕ್ಷಮೆಯ ದೀಕ್ಷೆಯ ನವೀಕರಣದ ಸಂಭ್ರಮದ ಹಬ್ಬ. ಹೌದು, ಈ ಕ್ರಿಸ್‌ಮಸ್ ಎಲ್ಲರ ಪಾಲಿಗೆ ಕ್ಷಮೆಯ ಯುಗಾದಿಯೇ ಆಗಲಿ!

ಅಂಕಗಳು ಲಭ್ಯ. ಆದ್ದರಿಂದ ಆ ದೇವರ ವಿಶೇಷ ಕೃಪೆ ನಿಮಗೆ ಬೇಕಾದರೆ ನೀವು ಕ್ಷಮೆಯನ್ನು ಮೈಗೂಡಿಸಿಕೊಳ್ಳಲೇಬೇಕು. ಕ್ಷಮಾನಿಧಿಯಾದ ಆ ದೇವರನ್ನೇ ನೆನೆದು ಯಾರನ್ನೂ ನಿಂದಿಸದೆ, ಹಂಗಿಸದೆ, ಯಾರಲ್ಲೂ ದೋಷವನ್ನು ಕಾಣದೆ ವರ್ತಿಸುವ ಸೌಜನ್ಯದ ದಿನಚರಿ ನಿಮ್ಮದಾಗಬೇಕು.

### ಕ್ಷಮಾಶೀಲತೆ, ಬಾಳಿನ ಭವ್ಯತೆ

ಚಿಕ್ಕಮಕ್ಕಳಲ್ಲಿ ದೈವಿಕ ವರ್ಚಸ್ಸು ಹೆಚ್ಚಿರುತ್ತದೆ. ಆ ಮಕ್ಕಳ ನಿರ್ಮಲ

ರೊಡನೆ ಮಾತು ಬಿಡುವುದು, ಇನ್ನೊಬ್ಬರನ್ನು ದ್ವೇಷಿಸುವುದು, ಆಗದವರನ್ನು ನಿಂದಿಸುವುದು–ಹೊಡೆದು ಬಡಿದು ಹಿಂಸಿಸುವುದು ಮೊದಲಾದ ಪ್ರವೃತ್ತಿ ಅವರದಾಗುತ್ತದೆ. ಅದೇ ಅಣ್ಣತಮ್ಮ, ಅತ್ತೆಸೊಸೆ, ತಂದೆಮಗ–ಇವರ ವೈಮನಸ್ಸಾಗಿ ಬೆಳೆದು ಸಂಸಾರದ ನಲಿವಿಗೆ ಮುಳುವಾಗುತ್ತದೆ. ಸಮಾಜ ಜೀವನದಲ್ಲೂ ಅಂದು ಮತಾಂತರದ ಅಗ್ನಿಗೆ ತುಪ್ಪವನ್ನೆರೆದದ್ದೂ ದಲಿತರನ್ನೂ, ಪತಿತರನ್ನೂ ಬಹಿಷ್ಕರಿಸಿದ ಸಂಪ್ರದಾಯಸ್ಥರ ನಿಷ್ಠುರ ಕ್ಷಮೆರಹಿತ ವರ್ತನೆಯೇ. ಆ ಕ್ಷಮೆಯ ಬರವೇ ಸೇಡಿನ ಭಾವದ ಕಿಡಿಯಾಗಿ ಧಗಧಗಿಸಿ

ಅದೆಷ್ಟೋ ಯುದ್ಧಗಳಿಗೂ ಕಾರಣವಾಗಿತ್ತು. ಅಂತೂ ಗಲಾಟೆ, ಗೊಂದಲ, ಅಶಾಂತಿ, ದ್ವೇಷ, ಹಿಂಸೆ, ಕ್ರೌರ್ಯಗಳಿಗೆಲ್ಲ ಮೂಲ ಕ್ಷಮೆಯ ಅಭಾವವೇ.

'ಆ ದೇವರು ಕ್ಷಣ ಕ್ಷಣವೂ ಕ್ಷಮಿಸುತ್ತ ಬದುಕಿಸುತ್ತಿರುವುದರಿಂದಲೇ ಎಲ್ಲರ ಬಾಳೂ ಬೆಳಗುತ್ತಿದೆ, ಸಂಚಿತ ಕರ್ಮದ ಮೂಲಕ ಆಟ ಆಡುವ ಆ ದೇವರು ನನ್ನ ಕ್ಷಮೆಯ ಪರೀಕ್ಷೆಗಾಗಿಯೇ ಇಂಥ ಅವಕಾಶವನ್ನು ಸೃಷ್ಟಿಸಿದ್ದಾನೆ' ಎಂಬೆಲ್ಲ ತಿಳಿವಿರದ ಅಜ್ಞಾನವೂ, 'ನನ್ನೆಣಿಕೆಯಂತಾಗಬೇಕು. ನಾನೇನು ಸಾಮಾನ್ಯನೇ? ನನ್ನನ್ನು ನೋಯಿಸಿದ್ದಕ್ಕೆ ಶಿಕ್ಷಿಸಿ ದಂಡಿಸಿ ನನ್ನ ಅಸಾಮಾನ್ಯತೆಯನ್ನು ತೋರಿಸಿಯೇ ಬಿಡುವೆ' ಎಂಬಂಥ ಅಹಂಕಾರದ ಠೇಂಕಾರವೂ ವ್ಯಕ್ತಿಯಲ್ಲಿನ ಕ್ಷಮೆಯ ಕುಡಿಯನ್ನೇ ಚಿವುಟಿ ಹಾಕಿ ದುಷ್ಟತನ ಹೆಚ್ಚಲು ಸಾರ ನೀರೆರೆಯುತ್ತವೆ. ಕ್ಷಮೆ ಇಲ್ಲದ ಹೃದಯದಲ್ಲಿ ದೈವಿಕತೆ ಕಂಗೊಳಿಸದು, ಆನಂದ, ಶಾಂತಿಗಳು ನೆಲಸವು. ಆದ್ದರಿಂದ ಆನಂದ, ಶಾಂತಿಗಳೆಲ್ಲ ಉಕ್ಕಲು ಕ್ಷಮೆ ಮೈಗೂಡಲೇ ಬೇಕು. ಜ್ಞಾನ, ಭಕ್ತಿ, ವಿವೇಕ, ವೈರಾಗ್ಯಗಳ ಮಾರ್ಗದಿಂದಷ್ಟೇ ಇದು ಸಾಧ್ಯ. ಕ್ಷಾಂತಿರೂಪದಲ್ಲಿ ಅಥವಾ ಕ್ಷಮಾರೂಪದಲ್ಲಿ ಎಲ್ಲರ ಹೃದಯದಲ್ಲೂ ಆ

### ಒಲ್ಮೆಯ ಕರೆ, ನಲ್ಮೆಯ ನೆರೆ

ಯಾವಾಗಲೂ ಒಳಿತಾಗಬೇಕೆಂಬ ಪ್ರಾರ್ಥನೆಯೊಂದಿಗೆ ದೇವರಿಗದನ್ನು ಅರ್ಪಿಸಿದ ಮೇಲೆ ಮನದಲ್ಲಿ ಆ ನೋವಿನ ಛಾಯೆಯೂ ಇರಕೂಡದು. ಮುಂದೆ ಅದೇ ವ್ಯಕ್ತಿ ನಿಮ್ಮ ಬಳಿ ಬಂದಾಗಲೂ ನಿಮ್ಮ ಅಂತರ್ಯದಲ್ಲಿ ಹಿಂದಿನ ಕಹಿನೆನಪು ಮರುಕಳಿಸಿ, ಆತನ ಮೇಲೆ ಸೇಡು ತೀರಿಸಿಕೊಳ್ಳುವ ಭಾವ ನಿಮ್ಮಲ್ಲಿ ಮೂಡದೆ ಆತನೊಡನೆ ಏನೂ ಆಗಿಲ್ಲವೆಂಬಂತೆ, ಆತನಿಗೆ ಒಳಿತಾಗಲೆಂಬ ಪ್ರಾರ್ಥನೆಯೊಂದಿಗೆ ನಗುನಗುತ್ತ ವರ್ತಿಸುವ ಸ್ವಭಾವ ನಿಮ್ಮದಾಗಬೇಕು. ರಾಜಕಾರಣಿಗಳೂ ತಮ್ಮ ಬದ್ಧವೈರಿಗಳೊಂದಿಗೂ ಹೀಗೆ ನಗುತ್ತ ಮಾತನಾಡುವರಾದರೂ ಒಳಗೊಳಗೇ ಕತ್ತಿ ಮಸೆಯುತ್ತಾರೆ. ಆದ್ದರಿಂದ ಅವರದು ಕ್ಷಮೆ ಅಲ್ಲ, ಬರೇ ಆಷಾಢಭೂತಿತನ ಅಷ್ಟೇ. ಕ್ಷಮೆಯಲ್ಲಿ ಹಾಗೆ ಒಳಗೊಂದು ಹೊರಗೊಂದು ಇಲ್ಲ. ಅದು ನಿಷ್ಕಪಟ ನಿರ್ಮಲ ಅಂತಃಕರಣದಿಂದ ಹೊಮ್ಮುವ ಒಲವಿನ ಹೊನಲಿನ ಪ್ರತೀಕ. 'ಒಳಿತಾಗಬೇಕು, ಎಲ್ಲೆಲ್ಲೂ ನಲಿವು ಗೆಲವು ಉಕ್ಕಬೇಕು' ಎಂಬ ಹೃದಯವೈಶಾಲ್ಯದ ಹಂಬಲದ ದ್ಯೋತಕ.

# ಕ್ಷಮೆ – ಕೃಪೆಯ ಕೆಚ್ಚಲು

ಸಾವಿಲ್ಲದ ಮನೆಯ ಸಾಸಿವೆಗಾಗಿ ಕಿಸಾಗೌತಮಿ ಎಲ್ಲೆಡೆ ಸುತ್ತಿ ಸುಳಿದು ಸಾವಿಲ್ಲದ ಮನೆ ಇಲ್ಲ ಎಂಬುದನ್ನು ಕಂಡುಕೊಂಡಂತೆಯೇ, ತೆರೆದ ಮನಸ್ಸಿನಿಂದ ಯೋಚಿಸಿದರೆ ಈ ಜಗದಲ್ಲಿಯೂ ಒಂದಲ್ಲ ಒಂದು ತಪ್ಪು ಮಾಡದ ಜನರು ಯಾರೂ ಇಲ್ಲ ಎಂಬುದು ತಿಳಿಯದಿರದು. ಹೀಗೆ ತಪ್ಪಾಗುವುದು ಸಹಜವಾದರೂ, ಆ ತಪ್ಪಿಗಾಗಿ ಕ್ಷಮೆಯಾಚಿಸುವ ಗುಣ ಸಹಜವಾಗಿ ಎಲ್ಲರಲ್ಲಿಲ್ಲ. ನಿಜವಾಗಿಯೂ ಕ್ಷಮೆ ಬೇಡುವುದು, ಕ್ಷಮೆ ನೀಡುವುದು – ಇವೆರಡೂ ಕ್ಷಮೆಯ ನಾಣ್ಯದ ಎರಡು ಮುಖಗಳು. ಗೊತ್ತಿದ್ದೋ, ಗೊತ್ತಿಲ್ಲದೆಯೋ ತಪ್ಪುಗಳಾಗುವುದರಿಂದ ಎಲ್ಲ ಕೆಲಸಗಳ ಮೊದಲೂ, ನಂತರವೂ 'ಮನ್ನಿಸು, ಮುನ್ನಡೆಸು, ದಾರಿತೋರು' ಎಂಬ ಪ್ರಾರ್ಥನೆ ಬಿಡದೆ ಹೊಮ್ಮಬೇಕು. ಅಪರಾಧೀಭಾವದ ಅಸಹಾಯಕತೆಯ ತೀವ್ರ ಶರಣಾಗತಿಯ ಕ್ಷಮಾಯಾಚನೆಯ ಕರೆಗೆ ಆ ದೇವರು ಬೇಗ ಓಗೊಡುತ್ತಾನೆ. ಗುರುದೇವ ಶ್ರೀ ರಾಮಕೃಷ್ಣರು ದೀನ ಭಾವದಲ್ಲಿ ಹಾಡುತ್ತಿದ್ದ ಇಲ್ಲಿನ ಪದ್ಯ ಹೃದಯದ ಅಂಥ ಭಾವನೆಗಳ ಎರಕ. ಋಷಿಮುನಿಗಳೂ, ಸಾಧು ಸಂತರೂ, ರಚಿಸಿದ ಎಲ್ಲ ಸ್ತುತಿ ಸ್ತೋತ್ರಗಳ ಅಂತರಗಂಗೆಯೂ 'ಅಪರಾಧ ಸಹಸ್ರಗಳಿದ್ದರೂ, ದೋಷ ಕೋಟಿಯಿದ್ದರೂ ಕರುಣೆದೋರಿ ಕ್ಷಮಿಸು ಪ್ರಭೂ' ಎಂಬ ಕ್ಷಮಾಯಾಚನೆಯ ಮೊರೆತವೇ ಆಗಿದೆ. ಕ್ರಿಕೆಟ್ ಆಟದಲ್ಲಿ ಎಲ್.ಬಿ.ಡಬ್ಲ್ಯು.ಗೆ ಅಪೀಲ್ ಮಾಡದೇನೇ ಹೇಗೆ ಔಟ್ ಕೊಡಲಾಗದೋ, ಹಾಗೆ ಕ್ಷಮೆಗಾಗಿ ಮೊರೆ ಸಲ್ಲಿಸದೆ ಆ ದೇವರೂ ಕ್ಷಮೆ ಕರುಣಿಸಲಾರ. ಕ್ಷಮೆಯಾಚಿಸದೆ, ಆತನ ಕ್ಷಮೆ ಸಿಗದೆ ಹೋದರೆ ಅವಕೃಪೆಯಿಂದ ಕರ್ಮಸಂಚಯ ಹೆಚ್ಚಿ ಆನಂದ, ಶಾಂತಿಗಳು ಕನಸಾಗುತ್ತವೆ. ಆದ್ದರಿಂದ ಈ ಕ್ಷಮಾಯಾಚನೆ ನಿಮ್ಮ ನಿತ್ಯಮೊರೆಯ ಪಲ್ಲವಿಯೇ ಆಗಬೇಕು. ದೇವರೊಡನಂತೇನು, ದೇವರನ್ನೇ ಹೊಂದಿರುವ ಮನುಷ್ಯರೊಡನೆಯೂ ತಪ್ಪಿಗಾಗಿ ಪಶ್ಚಾತ್ತಾಪದಿಂದ ತಕ್ಷಣ ಕ್ಷಮೆಯಾಚಿಸುವ ಸೌಜನ್ಯ ನಿಮ್ಮದಾಗಬೇಕು. ಇಂದೀಗ ಫ್ಯಾಷನ್ ಆಗಿರುವ Sorry, Excuse me... ಎಂಬೆಲ್ಲ ಪದಗಳು ಆ ಕ್ಷಮಾಯಾಚನೆಯನ್ನೇ ಧ್ವನಿಸಿದರೂ ಒಳಿತಾಗಬೇಕೆಂಬ ಹಂಬಲದ ತುಡಿತ ಅವುಗಳಲ್ಲಿಲ್ಲ. ಭಗವದ್ ಕೃಪೆಯ ಹಾಲನ್ನು ಕರುಣಿಸುವ ಕೆಚ್ಚಲು ಸಮೃದ್ಧವಾಗಲು ಕ್ಷಮಾಶೀಲತೆಯೂ ಸಮೃದ್ಧವಾಗಬೇಕು.

ಈ ಮರ್ತ್ಯಧೂಳಿಯಲಿ ಹುಟ್ಟಿ ಬೆಳೆದೆವು ನಾವು
ಈ ಧೂಳಿಯಲಿ ದೃಷ್ಟಿ ಕುರುಡಾಯಿತು ।
ಈ ಮಣ್ಣಿನಲಿ ನಾವು ಮಕ್ಕಳಂತಾಡಿದೆವು
ಅಭಯವನು ನೀಡಯ್ಯ ದಿವ್ಯಗುರುವೆ ॥

ನಮ್ಮ ಏನೋ ಒಂದು ಅಲ್ಪ ತಪ್ಪಿಗೆ ನೀನು
ನಿನ್ನ ಮಡಿಲಿಂದಾಚೆ ನೂಕಲಿಹೆಯಾ ।
ನೀನೇ ನಮ್ಮನ್ನು ತಳ್ಳಿ ಅನಾಥರಂದದಲಿ
ತೊಳಲಿಸುವೆಯಾ ನಮ್ಮ ಬಳಲಿಸುವೆಯಾ ॥

ಹೇ ಪ್ರಭುವೇ ಹಾಗೆಂದಿಗೂ ಗೈಯಬೇಡ
ನಮ್ಮನೆಂದಿಗೂ ಆಚೆ ನೂಕಬೇಡ ।

ನಾವು ಅಲ್ಪರು ಗುರುವೆ ಸಿಟ್ಟಾಗದಿರು ಪ್ರಭುವೆ
ಮೃದುನುಡಿಯೊಳೆಮ್ಮೊಡನೆ ಮಾತನಾಡು ॥

ನಿನ್ನೆದುರು ನಾವೆಲ್ಲ ಬರಿಯ ಹಸುಳೆಗಳಯ್ಯ
ಹೆಜ್ಜೆ ಹೆಜ್ಜೆಗೂ ಎಡವಿ ಬೀಳುತಿಹೆವು ।
ಇದನರಿತರೂ ನೀನು ರುದ್ರಮುಖ ಭ್ರುಕುಟಿಯೊಳು
ನಮ್ಮನೇತಕೆ ಇಂತು ನಡುಗಿಸುತಿಹೆ ॥

ನೂರು ಸಲ ನೀನೆತ್ತಿ ನಿಲ್ಲಿಸಿದರೂ ಕೂಡ
ನೂರು ಸಲ ಬೀಳುವುದು ನಮ್ಮ ಪಾಡು ।
ಇಂಥ ದುರ್ಬಲಮತಿಯ ಕರುಣದಿಂದಲಿ ನೋಡು
ಮೃದುನುಡಿಯೊಳೆಮ್ಮೊಡನೆ ಮಾತನಾಡು ॥

ದೇವರೇ ಇರುವುದರಿಂದ, ಕ್ಷಮೆ ಹೆಚ್ಚಲು ಆ ದೇವರ ಕೃಪೆಯ ಮೊರೆ ಹೋಗುವುದೊಂದೇ ದಾರಿ.

'ನಾನು ಇಂಥವ. ನನಗೆ ಹೀಗೆ ಮಾಡುವುದೇ? ನಾನಿದನ್ನು ಹೀಗೇ ಬಿಡೊಲ್ಲ. ಅವನಿಗೆ ಪಾಠಕಲಿಸಿಯೇ ತಿರುವೆ' ಎಂದೇ ಕಲಹಕ್ಕೆಳೆಸುವ 'ನಾನು' ಭಾವದ ಮೊರೆತವೇ ಎಲ್ಲ ಅಶಾಂತಿ, ಅನಾಹುತಗಳಿಗೆ ಕಾರಣವಾದುದರಿಂದ ಮೊದಲು ಆ 'ನಾನು' ಭಾವದ 'ಕಸ'ವನ್ನು ಹೋಗಲಾಡಿಸಿಕೊಳ್ಳಬೇಕು. ಅದಕ್ಕಾಗಿ ಮನುಷ್ಯರೊಡನೆ ಕಲಹಗೈಯದೆ ಆ ದೇವರೊಡನೆಯೇ ಹುಯಿಲಿಟ್ಟು ಪ್ರೀತಿಯ ಕಲಹಗೈಯುವ ಅಭ್ಯಾಸ ಮಾಡಬೇಕು, ಎಂಥ ನೋವಿನ ಪ್ರಸಂಗವೇ ಬಂದರೂ ನಗುನಗುತ್ತಾ ಅದನ್ನು ಸಹಿಸಿಕೊಂಡು, 'ಹಿಂದಿನ ಜನ್ಮದಲ್ಲಿ ನಾನೂ ಇದೇ ರೀತಿ ಯಾರನ್ನೋ ನೋಯಿಸಿರಬೇಕು. ಅದಕ್ಕೆ ಈಗ ಇಂಥ ಸನ್ನಿವೇಶ ಒದಗಿದೆ' ಎಂದೇ ಸಮಾಧಾನ ಮಾಡಿಕೊಂಡು 'ಇನ್ನಾದರೂ ನಾನು ಯಾರನ್ನೂ ನೋಯಿಸಬಾರದು. ದೇವರ ಈ ಪರೀಕ್ಷೆಯಲ್ಲಿ ನಾನು ಗೆಲ್ಲಲೇಬೇಕು' ಎಂಬ ದೀಕ್ಷೆ ತೊಟ್ಟು, ಆ ದೇವರೊಡನೆಯೇ 'ಮನ್ನಿಸು, ಮುನ್ನೆಡೆಸು, ದಾರಿತೋರು' ಎಂದೇ ಕಣ್ತುಂಬಿ ಬೇಡುತ್ತ 'ಪ್ರಭೂ, ಆತನಿಂದಾದ ಆ ಎಲ್ಲ ನೋವನ್ನು ನಿನಗೇ ಅರ್ಪಿಸುತ್ತಿದ್ದೇನೆ. ಆವನಿಗೆ ಸದ್ಬುದ್ಧಿ ಬರುವಂತೆ, ಒಳಿತಾಗುವಂತೆ ಮಾಡು ತಂದೆ!' ಎಂದೇ ಮೊರೆಯಿಡಬೇಕು.

ಯಾವಾಗಲೂ ಹಿರಿಯರೂ ಕಿರಿಯರನ್ನು ಕ್ಷಮಿಸುವ ದೊಡ್ಡತನ ತೋರಬೇಕು. ಕಿರಿಯರೂ ತಮ್ಮ ತಪ್ಪನ್ನೊಪ್ಪಿಕೊಂಡು ಪಶ್ಚಾತ್ತಾಪದಿಂದ ಹಿರಿಯರ ಕ್ಷಮೆ ಯಾಚಿಸಲೂ ಹಿಂದಾಗಬಾರದು. ಆಗ ಮಾತ್ರ ಅತ್ತೆಸೊಸೆ, ತಂದೆಮಗ, ಅಣ್ಣತಮ್ಮಂದಿರಲ್ಲೆಲ್ಲ ಸೌಹಾರ್ದ ನೆಲಸಿ ಸಾಮರಸ್ಯದ ಸಹಬಾಳ್ವೆ ಸಾಧ್ಯವಾಗುತ್ತದೆ. ಕ್ಷಮಾನಿಧಿಯಾದ ಆ ದೇವರ ನೆನಕೆ ಹೆಚ್ಚಿದಷ್ಟೂ ಕ್ಷಮೆಯ ಒರತೆ ಉಕ್ಕಿ ಹರಿಯುವಂತಾಗುತ್ತದೆ. ಅದಕ್ಕಾಗಿ ಓಂ ಶ್ರೀ ನವದುರ್ಗಾ ಮಾತಾಯೈ ನಮಃ, ಓಂ ಶ್ರೀ ಮಾರುತಿ ದೇವಾಯ ನಮಃ, ಸ್ವಾಮಿಯೇ ಶರಣಂ ಅಯ್ಯಪ್ಪ ಎಂಬಿತ್ಯಾದಿ ಮಂತ್ರಗಳನ್ನು ದಿನವೂ $(108\times3)=324$ ಬಾರಿಯಾದರೂ ಶ್ರದ್ಧಾಭಕ್ತಿಗಳಿಂದ ಜಪಿಸಬೇಕು. ಕ್ಷಮೆಯ ಕಡಲಾದ ಶ್ರೀರಾಮನ ಕೃಪೆ ಕೊಡಿಸುವ ಶ್ರೀರಾಮರಕ್ಷಾ ಸ್ತೋತ್ರಪಠಣವನ್ನು ದಿನಾಲೂ 3 ಬಾರಿಯಾದರೂ ಮಾಡಬೇಕು. 'ಮನ್ನಿಸಿ, ಮುನ್ನಡೆಸಿ, ದಾರಿ ತೋರಿ', 'ನಾನು ಎಂದೆಂದೂ ನಿಮ್ಮವನು, ನನ್ನ ಮೇಲೆ ಕೃಪೆ ದೋರಿ ಕಾಪಾಡಿ' ಎಂದು 33 ಬಾರಿಯಾದರೂ ದಿನವೂ ಒಂದು ಪುಸ್ತಕದಲ್ಲಿ ಬರೆದಿಡುವ ರೂಢಿ ಮಾಡಿ ಕ್ಷಮೆಯನ್ನು ಪೋಷಿಸಬೇಕು. ಬೆಳಗ್ಗೆ ಎದ್ದೊಡನೆಯೂ, ರಾತ್ರಿ ಮಲಗುವ ಮೊದಲೂ ನಿಮ್ಮ ತಪ್ಪುಗಳನ್ನೇ ಕ್ಷಮಿಸಿ ಆ ದೇವರು ನಿಮ್ಮನ್ನು ಸಲಹುವ ಪರಿಯನ್ನು ನೆನೆಸಿ, ಕಹಿಘಟನೆಗಳನ್ನೆಲ್ಲ ಮರೆಯುವಂತೆ ಮನಸ್ಸಿಗೆ ಸೂಚನೆ

ನೀಡಿ ನಿಮ್ಮಲ್ಲಿನ ಕ್ಷಮಿಸುವ ಔದಾರ್ಯವನ್ನು ನವೀಕರಿಸಿಕೊಳ್ಳಬೇಕು. ಪ್ರಕೃತಿ ವೀಕ್ಷಣೆಯ ಮೂಲಕ ದಿನದಿನವೂ ಈ ಭಾವವನ್ನು ಬಲವಾಗಿಸಿಕೊಳ್ಳಬೇಕು. ಕ್ಷಮೆಯೇ ನಿಮ್ಮ ದಿನಚರಿಯ ಉಸಿರಾಗುವಂತಾಗಬೇಕು. ಆ ರೀತಿ ಈವು ಇತರರಿಗೆ ದಯೆ ತೋರಿದಷ್ಟೂ ಆ ದೇವರೂ ನಿಮಗೆ ಕ್ಷಮೆಯಿತ್ತು ನಿಮ್ಮನ್ನು ಸಲಹುವುದು ಖಂಡಿತ.

'ಪಾಪ, ಬಡವ, ಬದುಕಿಕೋ' ಎಂದು ಉಡಾಫೆಯಿಂದ ಉದ್ಗರಿಸುತ್ತ ಶಿಕ್ಷಿಸದೆ ಬಿಡುವುದು ಕ್ಷಮೆ ಆಗದು. ಅದು ಕೇವಲ ದಯೆ ಆದೀತು ಅಷ್ಟೇ. ಕ್ಷಮೆಯಲ್ಲಿ ವ್ಯಕ್ತಿಯ ಒಳಿತನ್ನೇ ಹಾರೈಸುವ ಧನ್ಯತೆಯ ತುಡಿತ ಇರುತ್ತದೆ.

ಕ್ಷಮೆ ನೀಡುವವ ಶಿಕ್ಷಿಸದಿರುವುದು ಅಶಕ್ತತೆಯಿಂದಲ್ಲ. ಈ ಕ್ಷಮೆ ಎನ್ನುವುದು ಆ ರೀತಿ ಕೈಲಾಗದವನ ದೌರ್ಬಲ್ಯದ ಸಂಕೇತ ಅಲ್ಲ. ಅದು ಅಂತರಂಗದ ವಿಕಾಸದ, ಪ್ರಬುದ್ಧತೆಯ, ಆತ್ಮಶಕ್ತಿಯ ಪ್ರಾಬಲ್ಯದ ಸಂಕೇತ. ಅದರಲ್ಲಿ ಮೌನಧೀರತೆ ಇದೆ. ವೀರ ಔದಾರ್ಯ ಇದೆ. ಈ ಕ್ಷಮೆಯು ಆ ದೇವರು ತುಂಬ ಮೆಚ್ಚುವ ಗುಣ ಆದುದರಿಂದ ಕ್ಷಮೆ ವೈಗೂಡಿಸಿಕೊಂಡಾಗ ಅ ದೇವರ ವಿಶೇಷ ಕೃಪೆ ದೊರೆತು ಆನಂದ, ಆರೋಗ್ಯ, ಆಯುಷ್ಯಗಳೆಲ್ಲ ವೃದ್ಧಿಸುತ್ತವೆ; ನಿಶ್ಚಿಂತೆ, ನಿರ್ಭಯತೆ, ನಿರ್ಲಿಪ್ತತೆಗಳೆಲ್ಲ ಮೈದೋರುತ್ತವೆ. ಜೀವಶಿವಸೇವೆಯಲ್ಲೇ ಸುಖ ಕಾಣುವಂತಾಗುತ್ತದೆ. ಬೆಳಕು ಹರಿಯುತ್ತಲೇ ಕಾಲ್ಕೀಳುವ ಕತ್ತಲೆಯಂತೆ ಕ್ಷಮೆ ಮೈಗೂಡಿದಾಗ ದ್ವೇಷ, ವೈಷಮ್ಯಗಳೆಲ್ಲ ದೂರವಾಗಿ ಶಾಂತಿ-ಸೌಹಾರ್ದದ ಯುಗವೇ ಅವತರಿಸುತ್ತದೆ.

### ಆತ್ಮಶಕ್ತಿಯ ಹೂರಣ, ತೋರಣ

Man gets and forgets but God gives and forgives ಎಂಬೊಂದು ಮಾತಿದೆ. ಅಂದರೆ ಪ್ರೀತಿಯನ್ನು ನೀಡುವವರೂ, ಕ್ಷಮಾದಾನ ಮಾಡುವವರೂ ದೇವರಂತಾಗಬಲ್ಲರು. ಭೂಗ್ರಹವನ್ನೇ ದೈವಗ್ರಹವಾಗಿಸುವ ನನ್ನ ಕನಸು ನನಸಾಗಲು ಅಂಥವರೇ ಇಂದು ಹೆಚ್ಚಬೇಕಾಗಿದೆ. ಹೃದಯಗಳನ್ನು ಬೆಸೆದು ಮನುಕುಲವನ್ನೆಲ್ಲ ಒಂದಾಗಿಸುವ ಅದ್ಭುತ ಸಾಮರ್ಥ್ಯ ಕ್ಷಮೆಯಲ್ಲಿದೆ. ಕ್ಷಮೆಯು ಎಲ್ಲಬಗೆಯ ಭೇದಭಾವಗಳ ಅಡ್ಡಗೋಡೆಗಳನ್ನು ಕೆಡಹಿ ಅಂತರ್ಯದ ದೈವತ್ವದ ಆರಾಧನೆಗೈಯ ಬಲ್ಲದು. ಆತ್ಮಶಕ್ತಿಯನ್ನು ಬೇಗ ಜಾಗ್ರತಗೊಳಿಸಬಲ್ಲದು. ಕ್ಷಮೆ ಮೈಗೂಡದ ಹೊರತು ನರನು ಹರನಾಗಲಾರ, ಮಾನವನು ಮಾಧವನಾಗಲಾರ. ನರರನ್ನು ಹರರಾಗಿಸುವ ನನ್ನೀ ಆಧ್ಯಾತ್ಮಿಕ ಪ್ರಯೋಗಶಾಲೆಯ ಯಶಸ್ಸಿರುವುದೇ ಕ್ಷಮೆಯ ಮೈಗೂಡಿಕೆಯಲ್ಲಿ. ನೀವಂತೂ ಈ ಕ್ಷಮೆಯನ್ನು ಮೈಗೂಡಿಸಿಕೊಂಡು ಅದರ ಯಶೋಗಾಥೆಗೆ ಜೀವಂತ ಪುರಾವೆ ಆಗುವಿರಲ್ಲವೇ? *

## ಕ್ಷಮೆಗೈಯುವ ಜಮೆ

**ಕ್ಷಮೆ ಎಂಬುದು ದೇವರು ತುಂಬ ಮೆಚ್ಚುವ ಗುಣ ಆದುದರಿಂದ ಕ್ಷಮೆ ಮೈಗೂಡಿಸಿಕೊಳ್ಳುವುದರಿಂದ ಆ ದೇವರ ವಿಶೇಷ ಕೃಪೆ ನಿಮ್ಮ ಪಾಲಿಗೆ ಜಮೆ ಆಗುತ್ತದೆ. ಅದರಿಂದಾಗಿ ನಿಮ್ಮಲ್ಲಿ ಆಗುವ ಆಂತರಿಕ ಪರಿವರ್ತನೆಯ, ವಿಕಾಸದ ಪರ್ವದ ಪಕ್ಷಿನೋಟ ಇಲ್ಲಿದೆ–**



# ಈ ಪುಟ್ಟ ಹಕ್ಕಿಗೂ ಒಂದು ಮನೆ ಇದೆ!

ನಿಸರ್ಗ ಬದುಕಿನ ಪಾಠ ಕಲಿಸುತ್ತದೆ.
ಅದರಲ್ಲೊಂದನ್ನು ನಾವೂ ಆಯ್ದುಕೊಂಡಿದ್ದೇವೆ.
ಅದೇ ನಮ್ಮ

## ಗೃಹ ನಿರ್ಮಾಣ ಸಾಲ ಯೋಜನೆ

ಮನೆ ಮಂದಿಗೆ ನೆಮ್ಮದಿ-ಭದ್ರತೆ
ಒದಗಿಸುವ 'ಮನೆ' ಬಾಳಿನ ಪ್ರಥಮ ಆದ್ಯತೆ.
ಇರಲೊಂದು ಮನೆ ಬೇಕು; ಅದು ಸ್ವತದ್ದೇ ಆಗಿರಬೇಕು;
ಇದು ಪ್ರತಿಯೊಬ್ಬರ ಕನಸು. ನಿಮಗೂ ನಿಮ್ಮದೇ ಆದ
ಒಂದು ಚಿಕ್ಕ ಚೊಕ್ಕ ಮನೆ ಬೇಕು... ಅಲ್ಲವೇ?
ಈ ಬಗ್ಗೆ ನಾವೂ ಯೋಚಿಸಿದ್ದೇವೆ. ಸದಾ ಜಾಗೃತವಾದ
ಅನಂತ ಪ್ರಕೃತಿಯಂತೆ. ಅದಕ್ಕಾಗಿಯೇ ನಮ್ಮ ಈ
ಗೃಹನಿರ್ಮಾಣ ಸಾಲ ಯೋಜನೆ.
ಸ್ವಂತ ಮನೆ ಬೇಕೆಂಬ
ನಿಮ್ಮ ಬಯಕೆಗೆ
ಮೂರ್ತರೂಪ ನೀಡುವ
ಸರಳ, ಸುಲಭ ವಿಧಾನ.




ಹೆಚ್ಚಿನ ವಿವರಗಳಿಗೆ ಸಮೀಪದ ನಮ್ಮ ಶಾಖೆಗೆ ಬನ್ನಿ

# ಸಿಂಡಿಕೇಟ್ ಬ್ಯಾಂಕ್

HO/PUB/DEV/96

# ಪರಸ್ಪರ

### ★ ಬಿ. ಜೆ. ಎಸ್. ಹೊಳ್ಳ, ಮಣೂರು

● **ಬ್ರಹ್ಮದೇವರನ್ನು ವಿಷ್ಣುವಿನ ನಾಭಿಯಿಂದ ಹುಟ್ಟಿದಂತೆ ಚಿತ್ರಿಸುತ್ತಾರಲ್ಲ–ಯಾಕೆ ಹೀಗೆ? ಸಾಮಾನ್ಯವಾಗಿ ಬ್ರಹ್ಮದೇವರಿಗೆ ಪೂಜೆ ಸಲ್ಲುವುದಿಲ್ಲ ಯಾಕೆ?**

○ ಬ್ರಹ್ಮ, ವಿಷ್ಣು, ಮಹೇಶ್ವರರು ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣರಾದವರು. ಸಂಚಿತಕರ್ಮದ ನೆಲೆಯಲ್ಲಿ ಪಾಲನಗೈಯುವವ ವಿಷ್ಣು. ವ್ಯಕ್ತಿಯ ವರ್ತನೆಯನ್ನು ಹೊಂದಿಕೊಂಡು ಆ ಸಂಚಿತಕರ್ಮ ಹೆಚ್ಚಲೂ ಬಹುದು, ಕಡಿಮೆ ಆಗಲೂ ಬಹುದು. ಅಂತೂ ವ್ಯಕ್ತಿಯ ಮರುಹುಟ್ಟಿಗೆ ವಿಷ್ಣುಪಾಲಿತ ಆ ಸಂಚಿತ ಕರ್ಮವೇ ಕಾರಣ. ನಾಭಿ ಅಥವಾ ಹೊಕ್ಕಳು ಬಳ್ಳಿಯು ತಾಯಿಗೂ ಮಗುವಿಗೂ ಅಥವಾ ಸೃಷ್ಟಿಗೂ ಹೊಸಸೃಷ್ಟಿಗೂ ಸಂಬಂಧ ಕಲ್ಪಿಸುವ ಕೊಂಡಿ. ಆದ್ದರಿಂದಲೇ ಸಾಂಕೇತಿಕವಾಗಿ ಇವನ್ನೆಲ್ಲ ಬಿಂಬಿಸಲು ಶೇಷನ ಮೇಲೆ ವಿಷ್ಣು ಪವಡಿಸುವಂತೆ ಮಾಡಿ ಆತನ ನಾಭಿಯಿಂದ ಹೊರಡುವ ಕಮಲದಲ್ಲಿ ಬ್ರಹ್ಮನನ್ನು ಕುಳ್ಳಿರಿಸಿದರು ಅಷ್ಟೇ. ಸೃಷ್ಟಿ ಮಾಡುವಾಗ ಬ್ರಹ್ಮದೇವರು ಎಲ್ಲೆಡೆಯ ಎಲ್ಲ ವಿಚಾರಗಳನ್ನು ಅರಿತು ಬ್ರಹ್ಮಬರೆಹ ಅಥವಾ ವಿಧಿಯನ್ನು ನಿರ್ಧರಿಸುತ್ತಾರೆಂಬುದನ್ನು ಬಿಂಬಿಸಲೆಂದೇ ಬ್ರಹ್ಮದೇವರಿಗೆ ನಾಲ್ಕು ತಲೆಗಳನ್ನು ಗುರುತಿಸಿದರು. ಪೂಜೆ ಸಲ್ಲುವ ವಿಗ್ರಹ ಸಾಮಾನ್ಯವಾಗಿ ಉಬ್ಬುಕಲ್ಲಿನ ವಿಗ್ರಹ. ನಾಲ್ಕು ತಲೆಯ ವಿಗ್ರಹ ರಚನೆಯೂ ಕಷ್ಟ. ಹಿಂಬದಿಯ ಮುಖ ಅವಗಣನೆಗೆ ಗುರಿಯಾಗುವ ಪ್ರಮೇಯವೂ ಇದೆ ಎಂದೇ ಬ್ರಹ್ಮದೇವರ ವಿಗ್ರಹ ನಿರ್ಮಿಸಿ ಪೂಜೆ ಸಲ್ಲಿಸುವ ಕ್ರಮ ಬರಲಿಲ್ಲ ಅಷ್ಟೇ.

### ★ ಶಶಿಕುಮಾರ, ಪೆರ್ನಾಜೆ

● **ಮಾನವನ ಸೂತ್ರಧಾರಿಯೇ ದೇವರಾಗಿದ್ದು, ಆ ದೇವರೇ ಆ ಮಾನವನ ಪರೀಕ್ಷೆ ಮಾಡುವುದಾದರೂ ಯಾಕಾಗಿ?**

○ ಅದೇ ಅಧ್ಯಾಪಕರೇ ವಿದ್ಯಾರ್ಥಿಗೆ ಕಲಿಸಿದ್ದು ವಿದ್ಯಾರ್ಥಿಯ ಹಣೆಬರೆಹ ಗೊತ್ತಿದ್ದೂ ಪುನಃ ಅದೇ ಅಧ್ಯಾಪಕರೇ, ಅದೇ ವಿದ್ಯಾರ್ಥಿಗೆ ಪರೀಕ್ಷೆ ಮಾಡುವುದಾದರೂ ಯಾಕೆ ಎಂಬ ಧಾಟಿಯಲ್ಲಿದೆ ನಿಮ್ಮ ಪ್ರಶ್ನೆ. ವಿದ್ಯಾರ್ಥಿಯ ಉದ್ಧಾರಕ್ಕೆಂದು ಹೇಳಿದ ಮಾತು ಆತನ ಅಂತರ್ಯಕ್ಕೆ ನಾಟಿ ಆತನಲ್ಲಿ ಆಂತರಿಕ ಬದಲಾವಣೆ ಆಗಿದೆಯೇ ಎಂಬುದನ್ನು ತಿಳಿಯಲು ಅಧ್ಯಾಪಕರು ಪರೀಕ್ಷೆ ಮಾಡುವಂತೆ, ಜೀವನನುದ್ದಕ್ಕೂ ಸದ್ಗ್ರಂಥ, ಸಜ್ಜನ ಸಹವಾಸ, ಕಷ್ಟನಷ್ಟ ಇತ್ಯಾದಿಗಳ ಮೂಲಕ ಕಲಿಸಿದ ಪಾಠದಿಂದ ವ್ಯಕ್ತಿಯ ಅಂತರಂಗಸಂಸ್ಕರಣವಾಗಿ ಆತನ ವರ್ತನೆಯಲ್ಲಿ ದೈವೀಗುಣಗಳು ಪಕ್ವವಾಗಿವೆಯೇ ಎಂದು ತಿಳಿಯಲು ಆ ದೇವರು ಮನುಷ್ಯನ ಪರೀಕ್ಷೆ ಮಾಡುತ್ತಾನೆ. ಚಿನ್ನವನ್ನು ಶುದ್ಧಗೊಳಿಸಲು ಅದನ್ನು ಪುಟಕ್ಕಿಡುವ ವಿಧಾನದಂತೆಯೇ ವ್ಯಕ್ತಿಯ ಅಂತರಂಗದ ಸಂಸ್ಕರಣಗೈಯಲೂ ಆ ದೇವರು ಅನುಸರಿಸುವ ವಿಧಾನ ಇಂಥ ಪರೀಕ್ಷೆಗಳು.

### ★ ಗಾಯತ್ರಿ ರಮಾನಂದ, ಮುಂಬಯಿ

● **'ವಿವೇಕ ಸಂಪದ' ಶ್ರಾವಣ ಸಂಚಿಕೆಯಲ್ಲಿ ದುಡಿಯುವ ಮಹಿಳೆಯ ಬಗ್ಗೆ ತಿಳಿಸುತ್ತ 'ನಿಮ್ಮ ಸಂಬಳವನ್ನು ಪತಿಗೇ ಅರ್ಪಿಸಿ. ಆತ ನೀಡಿದ್ದನ್ನೇ ನಿಮ್ಮ ಖರ್ಚಿಗೆ ಉಪಯೋಗಿಸಿ. ಆತ ಏನೆಂದರೂ ತಾಳ್ಮೆಯಿಂದ ಸಹಿಸಿಕೊಳ್ಳಿ' ಎಂದಿದ್ದೀರಿ ಗುರೂಜೀ. ಮದ್ಯಪಾನ, ಧೂಮಪಾನದಂಥ ದುಶ್ಚಟಗಳ ದಾಸರಾದ ನನ್ನವರಿಗೆ ಈಗ ನನ್ನ ಸಂಬಳವನ್ನು ಕಿತ್ತುಕೊಂಡು ಮೆರೆದಾಡಲು ನಿಮ್ಮ ಮಾತಿನಿಂದ ನೆಲೆ ಸಿಕ್ಕಿದಂತಾಗಿದೆ. ನಾನೇನು ಮಾಡಬೇಕು? ನನ್ನ ಹಾಗೂ ನನ್ನ ಮಕ್ಕಳ ಗತಿ ಏನು?**

○ ನಾನೆಂದುದು ದೇವರೇ ಸರ್ವಸ್ವ ಎಂಬ ಸುದೃಢ ಭಕ್ತಿಯುಳ್ಳ ಪತಿಯ ಬಗ್ಗೆ ಮಾತ್ರ. ಅದಿಲ್ಲ ಎಂದರೆ ಅಲ್ಲೇ 'ಆತನ ಕೋಪದ ಜ್ವಾಲೆಯನ್ನು ಪ್ರೀತಿಯ ಮಳೆಯಿಂದ ನಂದಿಸಿ' ಎಂದೇ ಹೇಳಿರುವೆನಲ್ಲ. ದುಶ್ಚಟಗಳ ದಾಸರಾದ ಪತಿಗೆ ನೀವು ನಿಮ್ಮ ಕಿಂಚಿತ್ತೂ ಹಣ ಕೊಡಬೇಕಾಗಿಲ್ಲ. ಕೊಡಬೇಕಾದ್ದು ನಿಮ್ಮ ಪ್ರೀತಿ ಮಾತ್ರ. ಅಂಥವರು ದುಶ್ಚಟ ಬಿಡುವಂತೆ ನೀವೇ ಪ್ರೀತಿಯಿಂದ ಪ್ರಯತ್ನಿಸಿ. ಆ ನಿಟ್ಟಿನಲ್ಲಿ ಕಣ್ತುಂಬಿ ದೇವರಲ್ಲಿ ಮೊರೆಯಿಡಿ. ಅವರು ಸಭ್ಯರೂ, ಶಿಷ್ಟರೂ ಆದ ಮೇಲೇನೇ ನಿಮ್ಮ ಸಂಬಳವನ್ನವರಿಗೆ ಕೊಡಬಹುದು. 'ಹರ' ಭಾವ ಸಾಂದ್ರವಾಗಿದ್ದರೇನೇ ಅವರು ಪತಿಯಾಗಲು ಅರ್ಹರು. ಅದಿಲ್ಲ 'ನರ' ಭಾವದಿಂದಲೇ ಅವರು ದುಶ್ಚಟಗಳ ದಾಸರಾಗಿ ವಾನರರಂತೆ ವರ್ತಿಸಿ ಕೂಗಾಡುವುದಾದಲ್ಲಿ, ಅವರ ಕಿತಾಪತಿಯಿಂದ ನಿತ್ಯವೂ ನೀವು ನೊಂದಿರುವುದಾದಲ್ಲಿ ಅವರಿಗೆ ನಿಮ್ಮ ಸಂಬಳವನ್ನು ಖಂಡಿತ ಕೊಡದಿರಿ, ಆದರಿಂದ ಅವರು ಇನ್ನಷ್ಟು ಕೆಟ್ಟಾರು. ಅವರ ಉದ್ಧಾರಕ್ಕಾಗಿ ನೀವೀಗ ವಿಧವಿಧವಾಗಿ ಯತ್ನಿಸಿ. ಅವರ ಉದ್ಧಾರ ಆಗುವ ತನಕ ನೀವೇನೇ ವಿವೇಕದಿಂದ ನಿಮ್ಮ ಕುಟುಂಬದ ಮೇಲ್ಮೆಗೆ ನಿಮ್ಮ ದುಡಿತವನ್ನು ಉಪಯೋಗಿಸಿ.

### ★ ಕುಮಾರದಾಸ ಟಿ. ಸಾಲಿಯನ್, ತೊಟ್ಟಂ

● **ಇದೇ ದಿನಾಂಕ 15-8-1996ರಂದು ಮಧ್ಯಾಹ್ನ ಮಲ್ಪೆಯ ಹಣ್ಣು ಮುದುಕರಾದ ಶ್ರೀ ಕುಪ್ಪರಾಮ ಬಂಗೇರ ಎಂಬವರು ಎರಡೂ ಕೈಗಳನ್ನು ಜೋಡಿಸಿಕೊಂಡು ತಾನೀಗ ದೇವತೆಗಳನ್ನು ಕಾಣುತ್ತಿದ್ದೇವೆ ಎನ್ನುತ್ತಲೇ ಕೊನೆಯುಸಿರೆಳೆದರು. ಹೀಗೆಲ್ಲ ಆಗಲು ಸಾಧ್ಯವೇ?**

○ ಖಂಡಿತ ಸಾಧ್ಯ. ಹೆಚ್ಚಿನ ಜನರಿಗೆ ದೇವರೆಂದರೆ ಭೀತಿಯೇ ಹೊರತು ಪ್ರೀತಿ ಇಲ್ಲ. ಜೀವನದುದ್ದಕ್ಕೂ ಮೋಸ–ವಂಚನೆ ಮಾಡಿದವರಿಗೆ ಸಾಯುವ ಗಳಿಗೆಯಲ್ಲಿ ಆ ಭೀತಿ ಇನ್ನಷ್ಟು ಹೆಚ್ಚಿ ಆ ಭೀತಿಯಿಂದ ಮಾತೇ ಬಾರದು. ಆದರೆ ನಿಷ್ಕಲ್ಮಷ ಹೃದಯದಿಂದ ದೇವರಿಗೆ ಸರಿಯಾಗಿ ಬದುಕಿದ ವ್ಯಕ್ತಿಗೆ ದೇವರೆಂದರೆ ಪ್ರೀತಿ. ಆತನ ಹೃದಯದಲ್ಲಿ, 'ಈ ಜೀವನ ಸಾಕಿನ್ನು. ನಿಮ್ಮ ಸನ್ನಿಧಿ ಕರುಣಿಸಿ' ಎಂಬ ಮೊರೆ ಮುಗಿಲು ಮುಟ್ಟಿದಾಗ ಆ ದೇವರೇ ಬಂದು ಅವನನ್ನು ಕರೆದೊಯ್ಯುತ್ತಾನೆ. ಜೀವನವಿಡೀ ದೇವರನ್ನು ಪ್ರೀತಿಸಿದ ವ್ಯಕ್ತಿಗೆ ಮಾತ್ರ ತನ್ನ ಪ್ರೀತಿಯ ದೇವರ ಆಗಮನವನ್ನು ಬಾಯ್ತೆರೆದು ಹೇಳುವ ಧನ್ಯತೆ ಉಕ್ಕುತ್ತದೆ. ಹಾಗೆ ಹೇಳುತ್ತಾ ಆತ ಕೊನೆಯುಸಿರೆಳೆಯುತ್ತಾನೆ.

### ★ ಶ್ರೀಧರ ಸುವರ್ಣ, ನ್ಯೂಯಾರ್ಕ್

● **ನಮ್ಮ ಹಿರಿಯರ ಕಾಲದಿಂದಲೂ ನಡೆದುಕೊಂಡು ಬಂದ ನೇಮ, ಕೋಲ, ವಾರ್ಷಿಕ ಪೂಜಾದಿಗಳನ್ನು ಮುಂದುವರಿಸಿಕೊಂಡೇ ಹೋಗಬೇಕೇ? ಕೈ ಬಿಟ್ಟರೆ ಏನಾದರೂ ತೊಂದರೆಯಾಗುವುದೇ?**

○ಹಾಗೇನಿಲ್ಲ. 'ಮನ್ನಿಸಿ, ಮುನ್ನಡೆಸಿ, ದಾರಿತೋರಿ' ಎಂಬ ನಿಷ್ಠ ಮೊರೆ ನಿಮ್ಮದಾಗಿ, ನಿಮ್ಮ ದುಡಿತದ ಶೇ. 1ರಿಂದ ಶೇ. 10 ಅಂಶ ಲೋಕಕಲ್ಯಾಣಾರ್ಥ ಸಂತೋಷದಿಂದ ವಿನಿಯೋಗವಾಗುವುದೇ ಆದಲ್ಲಿ, ಈರೀತಿ ಕಟ್ಟುಕಟ್ಟಳೆಯ ಪೂಜಾದಿಗಳನ್ನು ನೆರವೇರಿಸಬೇಕಾಗಿಲ್ಲ. ಅಂಥವುಗಳನ್ನು ರಗಳೆ ಎಂಬರ್ಥದಿಂದ ಮಾಡಿದರೂ ಮಾಡದ ದೋಷ ತಪ್ಪದು. ಆದ್ದರಿಂದ ದೇವರ ಹೆಸರಿನಲ್ಲಿ ಆ ಬಾಬ್ತು ವಿನಿಯೋಗಿಸುವ ಹಣವನ್ನು ಸತ್ಕಾರ್ಯಕ್ಕೆ ವಿನಿಯೋಗಿಸಬಹುದು.

### ★ ಅಬ್ದುಲ್ ಅಜೀಜ್, ಕಾಸರಗೋಡು

● **ಹಿಂದೂಗಳಿಗಿಂತಲೂ ಮುಸ್ಲಿಂರಲ್ಲಿ ಅಚಲ ಶ್ರದ್ಧೆ ಇರುವುದರಿಂದ ಸನಾತನ ಹಿಂದೂಧರ್ಮಕ್ಕಿಂತ ಇಸ್ಲಾಂ ಧರ್ಮ ಹೆಚ್ಚು ಸತ್ವಶಾಲಿ ಅಲ್ಲವೇ?**

○ ಹಿಂದೂಗಳಲ್ಲಿರುವುದಕ್ಕಿಂತ ಮುಸ್ಲಿಂರಲ್ಲಿ ಹೆಚ್ಚು ಶ್ರದ್ಧೆ ಪ್ರೇರಿತವಾಗಿರುವುದು ನಿಜ. ಆದರೆ ಇದರರ್ಥ ಹಿಂದೂಧರ್ಮಕ್ಕಿಂತ ಇಸ್ಲಾಂ ಧರ್ಮ ಸತ್ವಶಾಲಿ ಎಂದಲ್ಲ. ಪ್ರಾಥಮಿಕ ಶಾಲೆಯ ಪುಸ್ತಕಭಂಡಾರದಲ್ಲಿ ಸರಳ ಭಾಷೆಯ ಕೆಲವೇ ಪುಸ್ತಕಗಳಿವೆ. ಆದರೆ ಅಲ್ಲಿನ ವಿದ್ಯಾರ್ಥಿಗಳಲ್ಲಿ ಓದುವ ಅಭ್ಯಾಸ ರೂಢಿಸಲ್ಪಟ್ಟದ್ದರಿಂದ ಜ್ಞಾನ ಗಳಿಸಬೇಕೆಂದಲ್ಲ–ಓದಬೇಕು ನಿತ್ಯವೂ ಎಂಬ ನಿಯಮಬದ್ಧರಾಗಿ ಅವರು ನಿತ್ಯವೂ ಓದಿದ್ದನ್ನೇ ಓದುತ್ತಿದ್ದಾರೆ. ಹೈಸ್ಕೂಲಿನ ಪುಸ್ತಕಭಂಡಾರದಲ್ಲಿ ಜ್ಞಾನ ಸಾಗರವನ್ನೇ ಒಳಗೊಂಡ ರಾಶಿ ಪುಸ್ತಕಗಳಿವೆ. ಓದುವ ಹವ್ಯಾಸ ಇದ್ದಲ್ಲಿ ಅದ್ಭುತ ಜ್ಞಾನವನ್ನು ಗಳಿಸಬಹುದಾಗಿದೆ. ಆದರೆ ಅಲ್ಲಿನ ವಿದ್ಯಾರ್ಥಿಗಳಿಗೆ ಓದುವ ಅಭ್ಯಾಸ ಇಲ್ಲ. ಆಗ ಹೈಸ್ಕೂಲಿಗಿಂತ ಪ್ರಾಥಮಿಕ ಶಾಲೆಯೇ ಸತ್ವಶಾಲಿ ಎನ್ನುವುದು ಸರಿಯೇ? ಅದೇ ರೀತಿ ಹಿಂದೂ ಧರ್ಮದಲ್ಲಿ ಆಧ್ಯಾತ್ಮಿಕ ಬೆಳಸಿಗೆ ಬೇಕಾದಷ್ಟು ಅವಕಾಶಗಳಿವೆ. ಆ ಹೆಚ್ಚು ಅವಕಾಶವನ್ನು ಕಡಿಮೆ ಮಂದಿ ಉಪಯೋಗಿಸುತ್ತಿದ್ದಾರೆ. ಇಸ್ಲಾಂ ಧರ್ಮದಲ್ಲಿ ಅವಕಾಶಗಳು ಕಡಿಮೆ. ಆದರೆ ಅದನ್ನೇ ಹೆಚ್ಚು ಮಂದಿ ಉಪಯೋಗಿಸುತ್ತಿದ್ದಾರೆ ಅಷ್ಟೇ.

### ★ ವಿಶ್ವನಾಥ ರಾವ್, ಮೇಗರವಳ್ಳಿ

● **'ಅಮಾವಾಸ್ಯೆಯ ದಿನ ತಲೆಗೆ ಎಣ್ಣೆಯನ್ನು ಹಾಕಬಾರದು ಅದರಿಂದ ಕೆಡುಕಿದೆ' ಎನ್ನುತ್ತಾರೆ. ಇದು ನಿಜವೇ?**

○ ತಲೆಗೆ ಎಣ್ಣೆಹಾಕಲು ಸ್ವಲ್ಪ ಸಮಯ ಬೇಕಲ್ಲವೇ? ಅಮಾವಾಸ್ಯೆಯ ದಿನ ಬೆಳಗುವ ಚಂದ್ರನಿಗೆ ಕತ್ತಲು ಕವಿದು ಕಷ್ಟಕ್ಕೀಡು ಮಾಡುವುದರಿಂದ ಆತನ ಆ ಕಷ್ಟದ ನಿವಾರಣೆಗೆ ನಿರಂತರ ದೇವರ ಧ್ಯಾನವೇ ನಡೆಯಲೆಂದು, ತಲೆಗೆ ಎಣ್ಣೆ ಹಾಕುವ ಸಮಯವೂ ಅದಕ್ಕೆ ವಿನಿಯೋಗವಾಗಲೆಂದು ಕೆಡುಕಿನ ಭೀತಿ ಹುಟ್ಟಿಸಿ, ಈ ಕ್ರಮ ರೂಢಿಗೆ ಬಂದಿರಬೇಕು. ಆದರೆ ಅದರಲ್ಲಿ ಹುರುಳಿಲ್ಲ. ಅಮಾವಾಸ್ಯೆಯಂದು ಚಂದ್ರನಿಗೆ ಕಷ್ಟ ಬರುವುದೂ ಅಲ್ಲ. ತಲೆಗೆ ಎಣ್ಣೆ ಹಾಕದಿದ್ದರೆ ಅದು ಹೋಗುವುದೂ ಇಲ್ಲ–ತಿಳಿಯಿರಿ.

# ನಮ್ಮ ನಿಮ್ಮೊಳಗೆ...

## ಡಿವೈನ್ ಪಾರ್ಕ್‌ನ ಅಕ್ಕಪಕ್ಕ



ವಿರಾಜಪೇಟೆಯಲ್ಲಿ ವಿವೇಕ ಜಾಗೃತ ಬಳಗದ ಉದ್ಘಾಟನೆ ಹಾಗೂ ಸಾಧನಾ ತರಬೇತಿ ಶಿಬಿರ ಕಾರ್ಯಕ್ರಮದಲ್ಲಿ ಪೂಜ್ಯ ವಿವೇಕಾನಂದ ಶರಣ ಸ್ವಾಮೀಜೀ, ಶ್ರೀ ಕೆ. ವಿ. ನಂಜಪ್ಪ, ಶ್ರೀ ರಾ. ವೆಂ. ಶ್ರೀನಿವಾಸಮೂರ್ತಿ



ಮಂಗಳೂರಿನಲ್ಲಿ 'ವಿವೇಕ ಸಂಪದ' ನವರಾತ್ರಿ ಸಂಚಿಕೆ ಬಿಡುಗಡೆ ಹಾಗೂ ಸಾಧನಾ ತರಬೇತಿ ಶಿಬಿರದ ಕಾರ್ಯಕ್ರಮದಲ್ಲಿ ಪೂಜ್ಯ ಶ್ರೀ ನಿರಂಜನ ಸ್ವಾಮೀಜೀ, ಪ್ರೊ| ಯು. ಹರಿದಾಸ ಭಟ್, ಡಾ. ಬಿ. ಆರ್. ಸೋಮಯಾಜಿ



ಹಾಸನದಲ್ಲಿ ವಿವೇಕ ಜಾಗೃತ ಬಳಗದ ಸಂಘಟನಾ ಸಮಾರಂಭದಲ್ಲಿ ಶ್ರೀ ರಾ. ವೆಂ. ಶ್ರೀನಿವಾಸಮೂರ್ತಿ, ಶ್ರೀ ಡಿ. ಎಂ. ಸುಮಿತ್ರ, ಶ್ರೀ ವಸಂತಕುಮಾರ ಪೆರ್ಲ, ಶ್ರೀ ಕೆ. ಪಿ. ನಂದನ ಪ್ರಭು.

## ಬೆಳೆಯಲಿ, ಬೆಳಗಲಿ 'ವಿವೇಕ ಸಂಪದ'!

**'ವಿವೇಕ ಸಂಪದ' ನವರಾತ್ರಿ ಸಂಚಿಕೆಯನ್ನು ಮೆಚ್ಚಿ ಬಂದ ಪತ್ರಗಳ ಮಹಾಪೂರದಿಂದ ಆಯ್ದ ಕೆಲವು ಅಭಿಪ್ರಾಯಗಳನ್ನಿಲ್ಲೀಗ ಪ್ರಕಟಿಸುತ್ತಿದ್ದೇವೆ. ಈ ಸಂಚಿಕೆಯ ಕುರಿತಾದ ನಿಮ್ಮ ಅಭಿಪ್ರಾಯಕ್ಕೂ ಸ್ವಾಗತ.**

● ದೀಪಹಚ್ಚಿದೊಡನೆ ಕತ್ತಲು ಓಡುವಂತೆ 'ವಿವೇಕ ಸಂಪದ' ಓದುವವರ ಮನದಿಂದ ಅಜ್ಞಾನದ ಕತ್ತಲು ದೂರ ಓಡುವುದು ಖಂಡಿತ.

— ಪೂಜ್ಯ ಶ್ರೀ ನಿರಂಜನ ಸ್ವಾಮೀಜೀ, ಸುಂಕದಕಟ್ಟೆ

● 'ಅಖಿಲಂ ಮಧುರಂ' ಎಂದು ಸೂರದಾಸರು ಶ್ರೀಕೃಷ್ಣನನ್ನುದ್ದೇಶಿಸಿ ಹೇಳಿದ ಮಾತು 'ವಿವೇಕಸಂಪದ'ಕ್ಕೂ ಅನ್ವಯಿಸುತ್ತದೆ.

— ಪ್ರೊ|ಯು. ಹರಿದಾಸ ಭಟ್, ನಿಟ್ಟೆ

● ತಾಳ್ಮೆಯ ಬಗ್ಗೆ ತಾಳ್ಮೆಯಿಂದ ಓದಿ ತಿಳಿದು ನನ್ನಲ್ಲೇ ತಾಳ್ಮೆ ಮೂಡಿಸಿಕೊಂಡು ನನ್ನ ವರ್ತನೆಯನ್ನೇ ಬದಲಿಸಿಕೊಂಡಿರುವೆ.

— ಶ್ರೀ ಕೆ. ವಿ. ಕೇಸರಿ, ಕಡಬ

● 'ವಿವೇಕ ಸಂಪದ'ದ ಮಾತುಗಳನ್ನು ಪುನಃ ಪುನಃ ಓದಿದಂತೆ ಹೊಸ ಅರ್ಥಲೋಕ ತೆರೆದು ಕೊಳ್ಳುತ್ತದೆ. 2 ತಿಂಗಳ ಅವಧಿಗೆ ಬೇಕಾದ ಆಧ್ಯಾತ್ಮಿಕ ತಿನಿಸೆಲ್ಲ ಅದರ ಒಂದು ಸಂಚಿಕೆ ಯಲ್ಲಿರುತ್ತದೆ.

— ಶ್ರೀಮತಿ ಪ್ರಭಾ ಉಪಾಧ್ಯಾಯ, ಮಸ್ಕತ್

● 'ವಿದ್ಯಾರ್ಥಿಗಳೇ, ಯಶಸ್ಸು ಕನಸಲ್ಲ!' ಗ್ರಂಥವನ್ನು ಎಲ್ಲ ಶಾಲೆಗಳಿಗೊದಗಿಸಿದಂತೆ 'ವಿವೇಕ ಸಂಪದ'ವನ್ನೂ ಎಲ್ಲ ಗ್ರಂಥಾಲಯ ಗಳಿಗೊದಗಿಸಿದರೆ ಅನೇಕರ ಬಾಳು ಬೆಳಗೀತು.

— ಶ್ರೀ ರಾಜಶೇಖರಯ್ಯ, ಮಧುಗಿರಿ

● ಪ್ರಯತ್ನಶೀಲತೆಯ ಸಮರ್ಪಕತೆಗೆ ದೈವ ಕೃಪೆ ಬೇಕೆಂದು ಅದೆಷ್ಟು ಅದ್ಭುತವಾಗಿ, ಸುಂದರವಾಗಿ ಮೂಡಿ ಬಂದಿದೆ! ನನ್ನ ಜೀವನಕ್ಕದರಿಂದ ಹೊಸಬೆಳಕು ಬಂದಿದೆ.

— ಶ್ರೀ ಭಾಸ್ಕರ ರಾವ್, ಚೆನ್ನೈ

● ಕುಂಡಲಿನೀಶಕ್ತಿಯ ಬಗ್ಗೆ ಅದ್ಭುತ ಚಿತ್ರ– ವಿಚಾರಗಳೊಂದಿಗೆ ಮೂಡಿಬಂದ ಬರೆಹ ಈ ಜಗತ್ತಿಗೇ ಹೊಸದು. ಆಧ್ಯಾತ್ಮವನ್ನು ವೈಜ್ಞಾನಿಕ ವಾಗಿ ನೋಡುವ ಅದರ ಪ್ರಯತ್ನ ಅನನ್ಯ ವಾದುದು.

— ಶ್ರೀ ಎಸ್. ಎನ್. ಶ್ರೀರಾಮ್, ಬೆಳಗಾಂ

● ಜಾಹೀರಾತುಗಳಲ್ಲೂ ಸದ್ವಿಚಾರ, ಕಲಾತ್ಮಕತೆಗಳನ್ನು ಬಿಂಬಿಸುವ ಸರ್ವಾಂಗ ಸುಂದರ 'ವಿವೇಕ ಸಂಪದ'ಕ್ಕೆ ಸಾಟಿ ಎಲ್ಲಿ?

— ಶ್ರೀ ಎಚ್. ಪ್ರಕಾಶ ನಾಯಕ್, ಮುಂಬಯಿ

## ● ಡಾಕ್ಟರ್‌ಜೀಯವರ ಕಾರ್ಯಕ್ರಮಗಳು ●

| ದಿನಾಂಕ | ಸಮಯ | ಕಾರ್ಯಕ್ರಮದ ಸಂಯೋಜಕರು ಮತ್ತು ಕಾರ್ಯಕ್ರಮದ ವಿವರ | ಕಾರ್ಯಕ್ರಮ ನಡೆಯುವ ಸ್ಥಳ |
|---|---|---|---|
| 8-12-1996 ರವಿವಾರ | ಅಪರಾಹ್ನ ಗಂಟೆ 3ರಿಂದ ಸಂಜೆ 5 | ● ಶ್ರೀ ಬಿ. ಆರ್. ಸೋಮಯಾಜಿ, ಆಫೀಸರ್, ಕರ್ಣಾಟಕ ಬ್ಯಾಂಕ್, ಕೊಡಿಯಾಲ್‌ಬೈಲ್, ಮಂಗಳೂರು – 575 003 ● ಆಧ್ಯಾತ್ಮಿಕ ಸಂವಾದ – 'ದೇವರು, ಧರ್ಮ ಮತ್ತು ಆಧುನಿಕ ಸಂಶಯ' | 'ಶ್ರೀ ಗುರುಚರಣ', ಆದರ್ಶನಗರ, ಬ್ರಹ್ಮಾವರ ಸಕ್ಕರೆ ಕಾರ್ಖಾನೆ ಬಳಿ, ಬ್ರಹ್ಮಾವರ – 576 213. ಉಡುಪಿ ತಾಲೂಕು |
| 22-12-1996 ರವಿವಾರ | ಪೂರ್ವಾಹ್ನ ಗಂಟೆ 7ರಿಂದ ಸಂಜೆ 6 | ● ವಿವೇಕ ಜಾಗೃತ ಬಳಗ, ಸುಳ್ಯ, ಎಣ್ಮೂರು ● C/o ಶ್ರೀ ಕೆ. ಪ್ರಕಾಶಕುಮಾರ ಶೆಟ್ಟಿ, ವಿವೇಕಾನಂದ ಸೆಂಟರ್, ವಿಶ್ವ ಕಾಂಪ್ಲೆಕ್ಸ್, ಜಟ್ಟಿಪಳ್ಳ ರಸ್ತೆ, ಸುಳ್ಯ – 574 239. ಫೋನ್: (08257) 21175 ● ಸಾಧನಾ ತರಬೇತಿ ಶಿಬಿರ | ಪಂಜ ಶ್ರೀ ಪರಿವಾರ ಪಂಚಲಿಂಗೇಶ್ವರ ದೇಗುಲ, ಪಂಜ, ಸುಳ್ಯ ತಾಲೂಕು |
| 14-1-1997 ಮಂಗಳವಾರ | ಮುಂಜಾನೆ ಗಂಟೆ 3ರಿಂದ 6 | ● ವಿವೇಕ ಜಾಗೃತ ಬಳಗ, ಕ್ಯಾತನಹಳ್ಳಿ ● C/o ಜಿ. ಕೃಷ್ಣ ಕುಮಾರ, ಉಲ್ಲಾಸ್ ಗಾರ್ಮೆಂಟ್ಸ್, ಕ್ಯಾತನಹಳ್ಳಿ, ಫೋನ್: (08236) 51209 P.P. ● ವಿಶೇಷ ವಿಶ್ವಮಂಗಳ ಹೋಮ | ವೀರೇಶ ಬಾನುಲಿ ಸ್ವಾಮಿ ವಿವೇಕಾನಂದ ಮಂದಿರ, ಕ್ಯಾತನಹಳ್ಳಿ – 571 427 ಪಾಂಡವಪುರ ತಾಲೂಕು ಮಂಡ್ಯ ಜಿಲ್ಲೆ |
| 15-1-1997 ಬುಧವಾರ | ಪೂರ್ವಾಹ್ನ ಗಂಟೆ 7ರಿಂದ 8 | ● ಸಾಮೂಹಿಕ ಕುಂಕುಮಾರ್ಚನೆ | |
| 16-1-1997 ಗುರುವಾರ | ಪೂರ್ವಾಹ್ನ ಗಂಟೆ 7ರಿಂದ ಸಂಜೆ 6 | ● ಸಾಧನಾ ತರಬೇತಿ ಶಿಬಿರ | |



ಶ್ರೀ ಗುರೂಜೀ ಸಂದೇಶ ಪ್ರಸಾರದ ಮೂಲಕ ಸದ್ವಿಚಾರ ಕ್ರಾಂತಿ ಮಾಡಹೊರಟಿರುವ ಮೈಸೂರಿನ ಸದ್ಭಕ್ತ ಶ್ರೀ ಎಂ. ಪಾಪೇಗೌಡ



ಹೊಸಂಗಡಿಯಲ್ಲಿ ಹೊಸದಾಗಿ ಉದಯಿಸಿದ ವಿವೇಕ ಜಾಗೃತ ಬಳಗದಲ್ಲಿ ಡಾಕ್ಟರ್‌ಜೀ ಆಧ್ಯಾತ್ಮಿಕ ಸಂವಾದದಲ್ಲಿ ಶ್ರೀ ಉದ್ಯಾವರ ಮಾಧವಾಚಾರ್ಯ, ಶ್ರೀ ಬಿ. ಶ್ರೀಪತಿ ಸೋಮಯಾಜಿ ಮತ್ತು ಶ್ರೀ ಎಚ್. ಪಿ. ನಾಯಕ್.



ಶ್ರೀ ಗುರೂಜೀ ಸೇವೆಯನ್ನೇ ತಪಸ್ಸಾಗಿಸಿಕೊಂಡಿರುವ ಶ್ರೀ ಗುರೂಜೀ ಸೇವಾತುರ ಮಂಗಳೂರಿನ ಶ್ರೀ ಎಂ. ಅಶೋಕ ಆಳ್ವ

ನಮ್ಮ [illegible] ಇವರೆಲ್ಲ —

# 'ವಿವೇಕ ಪ್ರಕಾಶನ'ದ ಪ್ರಕಟಣೆಗಳಿಗಾಗಿ ಇಲ್ಲಿ ವಿಚಾರಿಸಿ –

● ಉಡುಪಿ ತಾಲೂಕಿನಲ್ಲಿ –

● ಶ್ರೀ ಟಿ. ಶಂಭು ಶೆಟ್ಟಿ
ಸಾಯಿನಾಥ ಕಮರ್ಶಿಯಲ್ ಕ್ರೆಡಿಟ್
ಪ್ರೈವೇಟ್ ಲಿಮಿಟೆಡ್
ಕಲ್ಪನಾ ಸೆಂಟರ್, ಉಡುಪಿ–576 101
ಫೋನ್: (08252) 20543, 24440

● ಶ್ರೀ ಚಿತ್ರ ಕುಮಾರ್
ವಿಘ್ನೇಶ್ ಇಲೆಕ್ಟ್ರಿಕಲ್ಸ್
ಅಮಿೂನ ಕಂಪೌಂಡ್
**ತೊಟ್ಟಂ–576 143**
ಫೋನ್: (08252) 46309

● ಕುಂದಾಪುರ ತಾಲೂಕಿನಲ್ಲಿ –

● ಡಾ| ಎಸ್. ಪಿ. ಆಚಾರ್ಯ
ಶಿವಪುರ ಕ್ಲಿನಿಕ್,
**ಕೋಟೇಶ್ವರ–576 222**
ಫೋನ್: (08254) 61280

● ಶ್ರೀ ಕೆ. ಜಿ. ಕರಿಸಿದ್ದಪ್ಪ
ಸಹಾಯಕ ಕಾರ್ಯಪಾಲ ಅಭಿಯಂತರರು
ಟೈಪ್ 4, ಮನೆನಂಬ್ರ 8,
ಕ.ವಿ.ನಿ.ನಿ: ಹೊಸಂಗಡಿ–576 282
ಫೋನ್: (08254) 88209

● ಮಂಡ್ಯದಲ್ಲಿ –

● ಶ್ರೀ ಜಿ. ಕೆ. ಸಿದ್ದೇಗೌಡ
C/o ಗಂಗಾಧರ
126, LIG, 1ನೇ ಕ್ರಾಸ್
ಕುವೆಂಪುನಗರ
**ಮಂಡ್ಯ–571 401**

● ಶ್ರೀ ಜೆ. ಕೃಷ್ಣಕುಮಾರ
ಉಲ್ಲಾಸ ಗಾರ್ಮೆಂಟ್ಸ್
**ಕ್ಯಾತನಹಳ್ಳಿ–571 427**
ಫೋನ್: (08236) 51209 PP

● ಮೈಸೂರಿನಲ್ಲಿ –

● ಶ್ರೀ ಟಿ. ಬಿ. ಸೂರ್ಯನಾರಾಯಣ
360, 1ನೇ ಸ್ಟೇಜ್
ವಿಶ್ವೇಶ್ವರನಗರ
**ಮೈಸೂರು–570 008**

● ಶ್ರೀಮತಿ ಸುಬ್ಬಲಕ್ಷ್ಮಿ ನಂಜುಂಡಯ್ಯ
ನಂ. 5, ನಾಲ್ಕನೆಯ ಮೈನ್
ಜಯನಗರ
**ಮೈಸೂರು–570 014**

● ಮಂಗಳೂರು ತಾಲೂಕಿನಲ್ಲಿ –

● ಶ್ರೀ ಅಶೋಕ ಆಳ್ವ, ಎಂ.
'ಗುರುಕೃಪಾ', ಜಯಶ್ರೀ ಗೇಟ್,
ಕುಲಶೇಖರ
**ಮಂಗಳೂರು–575 005**
ಫೋನ್: (0824) 414082, 742280

● ಕುಮಾರಿ ಕೆ. ಪ್ರೇಮಾಕಲಾ ಪೈ
ಯೂಕೋಬ್ಯಾಂಕ್
ಕೆ.ಎಸ್.ರಾವ್ ರಸ್ತೆ,
**ಮಂಗಳೂರು–575 001**
ಫೋನ್: (0824) 441351

● ಶ್ರೀ ರವಿಚಂದ್ರ ಆರ್ಯ
126–ಎ, ಕೆಐಓಸಿಎಲ್ ಕಾಲೊನಿ
ಕಾವೂರು
**ಮಂಗಳೂರು–575 015**

● ಶ್ರೀ ರಾಮಕೃಷ್ಣ ಸೋಮಯಾಜ
ಹೊನ್ನಕಟ್ಟೆ ಹೌಸ್,
ಸುವರ್ಣ ಫರ್ನಿಚರ್ಸ್ ಎದುರುಗಡೆ
**ಕುಳಾಯಿ–574 196**

● ರಾಯಚೂರಿನಲ್ಲಿ –

● ಶ್ರೀ ವಿ. ಎನ್. ಟಾಂಡಿ
ನಂಬ್ರ 7-5-1, 81/1
ಜವಾಹರನಗರ
**ರಾಯಚೂರು–584 101**

● ಶ್ರೀಮತಿ ಸರೋಜ ಎಸ್. ರಾವ್
ನಂಬ್ರ 96, ಟೈಪ್ IV
ಆರ್.ಟಿ.ಪಿ.ಎಸ್. ಕಾಲೊನಿ
**ಶಕ್ತಿನಗರ–584 170**
ಫೋನ್: (08532) 46505

● ಶಿವಮೊಗ್ಗದಲ್ಲಿ –

● ಶ್ರೀ ವಿಜಯಕೃಷ್ಣ ಆರಾಧ್ಯ
ಕಾವ್ಯಶ್ರೀ ಫಾರ್ಮ
ಎಸ್.ಆರ್. ಕಾಂಪ್ಲೆಕ್ಸ್
ಜೆ.ಪಿ. ರಸ್ತೆ, ಶಿವಮೊಗ್ಗ–577 201
ಫೋನ್: (08182) 20381

● ಶ್ರೀ ಬಿ. ವಿ. ರಮೇಶ್
ಉಪಲೆಕ್ಕಾಧಿಕಾರಿಗಳು
ಕೆ.ಪಿ.ಸಿ.
**ಮಾಸ್ತಿಕಟ್ಟೆ–577 448**
ಫೋನ್: (08185) 82234, 83215 PP

● ಹಾಸನದಲ್ಲಿ –

● ಶ್ರೀ ಎಚ್. ಆರ್. ರಂಗಸ್ವಾಮಿ
ಕೆನರಾ ಬ್ಯಾಂಕ್, ಕರೆನ್ಸಿ ಚೆಸ್ಟ್,
ಶಂಕರಮಠ ರಸ್ತೆ
**ಹಾಸನ–573 201**
ಫೋನ್: (08172) 67215

● ಶ್ರೀ ರಾಜೇಶ್ ರಾವ್ ಎಂ.
ಶ್ರೀ ಸತ್ಯನಾರಾಯಣ ನಿಲಯ
2ನೇ ತಿರುವು, ಲಕ್ಷ್ಮೀಪುರಂ
ಯೇಸು ಸೇವಾಕೇಂದ್ರದ ಬಳಿ
**ಹಾಸನ–573 201**

● ಚಿಕ್ಕಮಗಳೂರಿನಲ್ಲಿ –

● ಶ್ರೀ ಎಂ. ಪಾಪೇಗೌಡ
C/o ಕೆ. ಟಿ. ಶೆಟ್ಟಿ
ಭಾರತ್ ಆಟೋಮೊಬೈಲ್ಸ್ ಬಳಿ
ಬಿಂದು ಪ್ಯಾಲೇಸ್ ಲಾಡ್ಜ್
ಮಲ್ಲಂದೂರು ರಸ್ತೆ
**ಚಿಕ್ಕಮಗಳೂರು–577 101**

● ಶ್ರೀ ಸಿ. ಎಚ್. ಪ್ರಕಾಶ್
ನಂಬ್ರ 286A, 3ನೇ ಸೆಕ್ಟರ್
**ಕುದುರೆಮುಖ–577 142**
ಫೋನ್: (08269) 54344 PP

● ಸುಳ್ಯ ತಾಲೂಕಿನಲ್ಲಿ –

● ವಿವೇಕಾನಂದ ಸೆಂಟರ್
ವಿಶ್ವ ಕಾಂಪ್ಲೆಕ್ಸ್,
ಜಟ್ಟಿಪಳ್ಳ ರಸ್ತೆ,
**ಸುಳ್ಯ–574 239**
ಫೋನ್: (08257) 21175

● ಶ್ರೀ ಡಿ. ಎಂ. ಸುಮಿತ್ರ
ಸುಮಿತ್ರ ಎಸೋಸಿಯೇಟ್ಸ್
ಶ್ರೀರಾಂ ಪೇಟೆ
**ಸುಳ್ಯ–577 239**
ಫೋನ್: (08257) 20559

● ಶ್ರೀ ಸದಾನಂದ
ವಿವೇಕಾನಂದ ಕಾರ್ನರ್
ನಿಂತಿಕಲ್ಲು
**ಎಣ್ಮೂರು–574 202**

● ಶ್ರೀ ಶಂಕರಪ್ರಸಾದ್ ರೈ
ಶ್ರೀಗಣೇಶ ಜ್ಯೂಸ್ ಸೆಂಟರ್
ಕಲ್ಲುಗುಂಡಿ, ಸಂಪಾಜೆ
ಫೋನ್: (08257) 86320
86215 PP

(ಮುಂದುವರಿಯುವುದು)

# ದೇವರು ಸ್ವೀಕರಿಸಲು ಇಂತಿರಲಿ ನಿಮ್ಮ ಸೇವೆ!



'ತೀರ್ಥಕ್ಷೇತ್ರಗಳಿಗೆ ಬರಿದೆ ಭೇಟಿಕೊಟ್ಟು ಬಂದರೆ ಏನೂ ಫಲವಿಲ್ಲ. ಅಲ್ಲಿ ಏನಾದರೂ ಸೇವೆ ಮಾಡಿಸಬೇಕು. ಇಲ್ಲವಾದರೆ ದೇವರ ಕೃಪೆ ದೊರೆಯದು' ಎನ್ನುತ್ತಾರೆ ನಮ್ಮ ಪುರೋಹಿತರು. ಅದರಂತೆ ಡಿವೈನ್ ಪಾರ್ಕ್‌ಗೆ ಬಂದು ದೇವರ ಕೃಪೆ ಪಡೆಯಲು ಏನಾದರೂ ಸೇವೆ ಮಾಡಿಸುವ ಎಂದರೆ ಅಲ್ಲಿ ಬೇರೆ ಫಲಕಗಳಿವೆಯೇ ಹೊರತು ಉಳಿದ ದೇಗುಲಗಳಲ್ಲಿರುವಂತೆ ಸೇವಾವಿವರದ ಫಲಕ ಇಲ್ಲ. ಅದರರ್ಥ ಇಲ್ಲಿನ ದೇವರಿಗೆ ಭಕ್ತರ ಸೇವೆ ಬೇಡವೆಂದೇ? ಅಥವಾ ಅಂಥ ಸೇವೆಗಿಂತ ಭಿನ್ನವಾದ ಸೇವೆ ಬೇಕೆಂದೇ? ಹಾಗಾದರೆ ಉಳಿದ ದೇಗುಲಗಳಲ್ಲಿ ನಾವು ಗೈಯುವ ವಿವಿಧ ಸೇವೆಗಳಿಂದ ಕೃಪೆ ಸಿಗದೇ? ದೇವರೊಲುಮೆ ಗಳಿಸಲು ಪ್ರಶಸ್ತವಾದ ಸೇವೆ ಯಾವುದು ಹಾಗಾದರೆ?' ಎಂಬ ಹಿರಿಯೂರಿನ ಶ್ರೀ ರಾಮಮೂರ್ತಿಯವರ ಸಂದೇಹಕ್ಕಿಲ್ಲಿ ಉತ್ತರಿಸಿರುವ ಶ್ರೀ ಗುರೂಜೀ, 'ನಾನು' ಭಾವದ 'ಕಸ'ವನ್ನು ಆ ದೇವರಿಗೆ ಸಮರ್ಪಿಸುವುದೇ ಅತ್ಯುತ್ಕೃಷ್ಟ ಸೇವೆ ಎನ್ನುತ್ತ ಸೇವೆ ಸಲ್ಲಿಸುವ ಭಕ್ತನ ಹೃದಯದ ಭಾವತೀವ್ರತೆಗನುಗುಣವಾಗಿ ದೇವರಕೃಪೆ ದೊರೆಯುತ್ತದೆಂಬುದನ್ನು ವಿಷದಪಡಿಸಿ, ಆ ನಿಟ್ಟಿನಲ್ಲಿ ದೇಗುಲಗಳಲ್ಲಿನ ಸೇವೆಗಳ ಹಿಂದಿನ ಭಾವಲೋಕದ ಮೇಲೆ ಬೆಳಕು ಚೆಲ್ಲಿದ್ದಾರೆ. ಸರ್ವಸೇವೆಗಳ ಮಹಿಮೆಯ ಭಾಷ್ಯದಂತಿರುವ ಶ್ರೀ ಗುರೂಜೀ ವಿಚಾರಧಾರೆ ನಿಮ್ಮೆಲ್ಲರ ಕಣ್ತೆರೆಸಿ ದೇವರು ಬಯಸುವ ಸೇವೆ ಸಲ್ಲಿಸಲು ಅಥವಾ ದೇವರಿಗೆ ಪ್ರಿಯವಾಗುವಂತೆ ಸೇವೆ ಸಲ್ಲಿಸಲು ಇನ್ನಾದರೂ ನಿಮ್ಮನ್ನು ಪ್ರೇರಿಸಲಿ!

## ಸೇವೆಯ ಹಿರಿಮೆ, ಗರಿಮೆ

ಜನರ ಸೇವೆ ಮಾಡುವುದು ಎಂದರೆ ಜನರಿಗೆ ಉಪಕಾರ ಮಾಡುವುದೆಂದರ್ಥ ಅಲ್ಲವೆ? ಹಾಗಾದರೆ ದೇಗುಲಗಳಲ್ಲಿ ದೇವರ ಸೇವೆ ಮಾಡುವುದು ಎಂದರೆ ಆ ದೇವರಿಗೆ ಉಪಕಾರ ಮಾಡುವುದೆಂದರ್ಥವೇ? ಹೌದು, ಅಲ್ಲೂ ದೇವರಿಗೆ ಉಪಕಾರ ಮಾಡುವುದೆಂದೇ ಅರ್ಥ. ಆ ದೇವರಿಗೆ ತನ್ನ ಲೀಲೆ ತೋರಿಸಲು ಮನುಷ್ಯ ಅವಕಾಶ ಮಾಡಿಕೊಡುವುದೇ ದೊಡ್ಡ ಉಪಕಾರ. ಕೋಣೆಯ ಕಿಟಕಿ, ಬಾಗಿಲುಗಳನ್ನು ತೆರೆಯದೆ ಹೇಗೆ ಬೆಳಕು ಒಳಬರಲಾರದೋ ಅದೇ ರೀತಿ ಮನುಷ್ಯ ತನ್ನಲ್ಲಿನ ಬಂಧಿಸುವ 9 ಮಂದಿ ಪ್ರೇರಿತ 'ನಾನು' ಭಾವವನ್ನು ಹಿಂಗಿಸಿಕೊಳ್ಳದಿದ್ದರೆ ಆ ದೇವರು ಆತನೆದೆಗುಡಿಯಲ್ಲಿ ವಿಶೇಷವಾಗಿ ಆವಿರ್ಭವಿಸಿ ತನ್ನ ವಿಶೇಷ ಕೃಪೆದೋರಲಾರದವನಾಗುತ್ತಾನೆ. ಆದ್ದರಿಂದ 'ನಾನು' ಭಾವವನ್ನು ದೇವರಿಗೆ ಸಮರ್ಪಿಸುವುದೇ ದೇವರಿಗೆ ಗೈಯುವ ದೊಡ್ಡ ಉಪಕಾರ–ಪರಮ ಸೇವೆ. ಆ 'ನಾನು' ಭಾವ ಸಮರ್ಪಣೆಯ ಪ್ರಾತ್ಯಕ್ಷಿಕೆಯಾಗಿಯೇ ದೇಗುಲಗಳಲ್ಲಿ ವಿವಿಧ ಸೇವೆಗಳನ್ನು ನೆರವೇರಿಸುವ ಕ್ರಮ ಆಚರಣೆಗೆ ಬಂತು.

ಎರಡಕ್ಕೆ ಮೂರನ್ನು ಕೂಡಿಸಿದರೆ ಐದು ಆಗುತ್ತದೆಂದು ಬರಿ ಮಾತಿನಲ್ಲೇ ತಿಳಿಸಿಬಿಡಬಹುದು. ಅದನ್ನು ಇನ್ನಷ್ಟು ಸ್ಪಷ್ಟಪಡಿಸಲು ಬೋರ್ಡಿನ ಮೇಲೆ ಬರೆದೂ ತೋರಿಸಬಹುದು. ಹಾಗಲ್ಲ ಮತ್ತಷ್ಟು ಚೆನ್ನಾಗಿ ಮನದಟ್ಟು ಮಾಡಿಸಬೇಕೆಂದಿದ್ದರೆ ಎರಡು ಗೋಲಿಗಳನ್ನೂ, ಮೂರು ಗೋಲಿಗಳನ್ನೂ ತೋರಿಸಿ ಅವುಗಳನ್ನು ಒಟ್ಟು ಸೇರಿಸಿ ಐದು ಗೋಲಿಗಳಾಗುತ್ತವೆಂಬುದನ್ನೂ ತೋರಿಸಬಹುದು. ಸುಗಮ ಕಲಿಕೆಗೆ ನೆರವಾಗುವ ಆ ಬೋಧನೋಪಕರಣ–Teaching Aidsಗಳಂತೆ, ದೇವರಿಗೆ 'ನಾನು' ಭಾವವನ್ನು ಅರ್ಪಿಸುವುದನ್ನು ಕಣ್ಣಿಗೆ ಕಟ್ಟಿಸಿ ಮನಗಾಣಿಸಲು ಸಾಧನೋಪಕರಣ–Spiritual Aidsಗಳಾಗಿ ವಿವಿಧ ಸೇವಾವಿಧಾನಗಳು ಚಾಲ್ತಿಗೆ ಬಂದವು. ಕೂಡಿಸಿದಾಗ ಇಷ್ಟಾಗುತ್ತದೆಂದು ಬರಿದೆ ತಿಳಿಸಿದಂತೆ ಇತರ ಧರ್ಮಗಳಲ್ಲೂ 'ನಾನು' ಭಾವ ಸಮರ್ಪಣೆಗೆ ಕೇವಲ ಪ್ರಾರ್ಥನೆಯನ್ನು ಮಾತ್ರ ಸಲ್ಲಿಸಿದರೆ, ವಿಕಾಸದ ಉತ್ತುಂಗ ಶಿಖರವಾದ ಹಿಂದೂಧರ್ಮದಲ್ಲಿ 'ಆಂತರಿಕ ಅಶಾಂತಿ ನೀಗಿಸು, ಗೊಂದಲ ಪರಿಹರಿಸು, ಅವುಗಳಿಗೆಲ್ಲ ಮೂಲವಾದ 'ನಾನು' ಭಾವವನ್ನೇ ಅಳಿಸು' ಎಂಬ ನಮ್ರ ಪ್ರಾರ್ಥನೆಯ ಪ್ರಾತ್ಯಕ್ಷಿಕೆಯಾಗಿ ಈ ಸೇವೆಗಳನ್ನು ಸಲ್ಲಿಸಲಾಗುತ್ತಿದೆ. ಆದ್ದರಿಂದ ಈ ಸೇವೆಗಳು ಆ ದೇವರೆದುರು ಭಕ್ತನ ಆಂತರ್ಯವನ್ನು ಬಯಲು ಮಾಡುವ ಕನ್ನಡಿಗಳೂ ಹೌದು, 'ನಾನು' ಸೊನ್ನೆಯಾಗಿಸಿಕೊಳ್ಳಬೇಕೆಂಬ ಭಕ್ತನ ತುಡಿತವನ್ನು ಪೋಷಿಸಿ ಬಲವಾಗಿಸಿ ಸಾಧನೆಯ ಶಿಖರಕ್ಕೊಯ್ಯುವ ಸೋಪಾನಗಳೂ ಹೌದು. ಹೀಗೆ ಹಣ್ಣುಕಾಯಿ ಸೇವೆಯು ಕಾಯಿಯಾಗಿರುವ ಬಂಧಿಸುವ 9 ಮಂದಿಯನ್ನು ಹಣ್ಣಾಗಿಸಿ ಮೃದುವಾಗಿಸುವ ದ್ಯೋತಕ ಆದರೆ ಕರ್ಪೂರಾರತಿಯು 'ನಾನು' ಭಾವ ಪೋಷಕ ಸಂಚಿತಕರ್ಮವನ್ನು ಕರಗಿಸುವುದರ ಪ್ರತೀಕ. ಹೂವಿನ ಸೇವೆಯು ಸದ್ಭಾವನೆಯ ಸೌರಭ ಹೆಚ್ಚಿಸೆಂಬ ಮೊರೆಯ ಸೂಚಕವಾದರೆ, ಹೋಮ ಸೇವೆಯು 'ನಾನು' ಭಾವ ಪ್ರೇರಿಸುವ ಬಂಧಿಸುವ 9 ಮಂದಿಯನ್ನು ಭಸ್ಮವಾಗಿಸಿ ನೀಗಿಸಿಕೊಳ್ಳುವುದರ ಪ್ರತೀಕ.

## 'ನಾನು' ಸೊನ್ನೆ, 'ಭಾನು' ಸನ್ನೆ

ದೇಗುಲಕ್ಕೆ ತೆರಳಿದಾಗ ದೇವರ ಕೃಪೆ ಸಿಗಲು 'ನಾನು' ಭಾವ ದೂರಾಗಬೇಕು. ಆ 'ನಾನು' ಭಾವ ದೂರಾಗಿದೆ ಎಂಬ ವಾಗ್ದಾನದ ದ್ಯೋತಕವಾಗಿಯೇ ಈ ಸೇವೆಗಳನ್ನು ಆಚರಿಸುವುದು ರೂಢಿ ಆಯಿತು. ಆದರೆ ಬರಬರುತ್ತ ಜನ 'ನಾನು' ಭಾವಹರಣದ ವಿಚಾರ ಬಿಟ್ಟು ಈ ಸೇವೆಗಳ ಆಚರಣೆಯಿಂದಲೇ ದೇವರ ಕೃಪೆ ಎಂದೇ ತಿಳಿದರು. ಆದ್ದರಿಂದಲೇ ನಿಮ್ಮ ಪುರೋಹಿತರೆಂದಂತೆ ಯಾವುದಾದರೂ ಸೇವೆ ನಡೆಸದಿದ್ದರೆ ದೈವಕೃಪೆ ಸಿಗದೆಂದು ತಪ್ಪಾಗಿ ತಿಳಿದರು. ಇನ್ನು ಕೆಲವರು ಈ ಸೇವೆಯ ಅಂತರಾರ್ಥವನ್ನೇ ಮರೆತು ಅದನ್ನು ವೈಭವೀಕರಿಸಿದರು. ಹಣ್ಣುಕಾಯಿ ಸೇವೆಗೆ ಬೆಳ್ಳಿಯ ಅಥವಾ ಚಿನ್ನದ ಬಟ್ಟಲಿನಲ್ಲಿ ಹಣ್ಣುಕಾಯಿ ತಂದರು.



### 'ಭಾನು' ಹಿಗ್ಗಲು 'ನಾನು' ತಗ್ಗಲಿ!

ಮಕ್ಕಳಾಟದ ಆಡುಹಲಗೆಯ ಒಂದು ಕಡೆ ಕುಳಿತರೆ ಆ ಕಡೆ ತಗ್ಗಿ ಇನ್ನೊಂದು ಕಡೆ ಏರುತ್ತದಲ್ಲನೇ? ಅದೇ ರೀತಿ ಆಂತರ್ಯದಲ್ಲಿ 'ನಾನು' ಭಾವದ ಮಟ್ಟ ತಗ್ಗಿದಾಗ 'ಭಾನು' ಭಾವದ ಅಥವಾ ದೈವಿಕತೆಯ ಮಟ್ಟ ಏರುತ್ತದೆ–'ನಾನು'ವಿನ 'ಕಸ' ಕಡಿಮೆಯಾಗಿ 'ಭಾನು'ವಿನ 'ರಸ'ಕ್ಕೆ ಅವಕಾಶ ಹೆಚ್ಚುತ್ತದೆ. ತನ್ನ ಆವಿರ್ಭಾವಕ್ಕೆ ಅವಕಾಶ ಮಾಡಿಕೊಟ್ಟ ಭಕ್ತನ ಸಾಧನೆಗೆ ಮೆಚ್ಚಿ ಆ ದೇವರು ಹಿರಿಹಿರಿ ಹಿಗ್ಗುತ್ತಾನೆ. ಆ ದೇವರಿಗಾಗುವ ಹಿಗ್ಗೇ ಭಕ್ತನಲ್ಲಿ ಆನಂದ, ಶಾಂತಿಗಳಾಗಿ ಮಾರ್ದನಿಸುತ್ತದೆ. ಆದ್ದರಿಂದ ದೇವರು ಹಿಗ್ಗಲು ಅಥವಾ ದೇವರ ವಿಶೇಷ ಕೃಪೆ ಸಿಗಲು 'ನಾನು' ಭಾವವನ್ನು ಹಿಂಗಿಸಿಕೊಳ್ಳುವುದೊಂದೇ ದಾರಿ. ಸಾಧನೆಯ ಸಾರಸರ್ವಸ್ವವೂ ಇದೇನೇ.

ಹೋಮ ಸೇವೆಗೆ ಭರ್ಜರಿ ಆಡಂಬರಗಳನ್ನೇರ್ಪಡಿಸ ತೊಡಗಿದರು... 'ನಾನು' ಭಾವವನ್ನು ಮರೆಸ ಬೇಕಾಗಿದ್ದ ಸೇವೆ ಹೀಗೆ 'ನಾನು' ಭಾವವನ್ನು ಮೆರೆಸುವ ಸಾಧನ ಆಯಿತು. ಇದೇ ಪರಿಸ್ಥಿತಿ ಮುಂದುವರಿಯುತ್ತ ಬಂದೀಗ ಸೇವೆ ಎಂಬುದು ಸಂಪತ್ತಿನ ಪ್ರದರ್ಶನವೇ ಆಗಿ ತಿರುಳನ್ನೇ ಮರೆತು ಬರೆದರೆ ಅಂಕ ಸಿಗಲು ಸಾಧ್ಯವೇ? ಅದೇ ರೀತಿ ಯಾಗಿದೆ ಇಂದೀಗ ಹೆಚ್ಚಿನ ಹಿಂದೂಗಳ ಸ್ಥಿತಿ. ಭಕ್ತರ ಅಂಥ ಸೇವೆಯನ್ನು ದೇವರು ಮೆಚ್ಚನು. ಆತನಿಗೆ ಬೇಕಾಗಿರುವ ಸೇವೆ ಅಂಥ ಸೇವೆ ಅಲ್ಲ ಎಂಬುದನ್ನು ಮನಗಾಣಿಸಲೆಂದೇ ನಾನು ನನ್ನ ಆಧ್ಯಾತ್ಮಿಕ ಪ್ರಯೋಗಶಾಲೆಯಾದ ಈ ಡಿವೈನ್

ನಿಜವಾಗಿಯೂ ದೇವರು ಹಣ್ಣುಕಾಯಿ, ಚಿನ್ನ ಬೆಳ್ಳಿ, ನಗನಾಣ್ಯಗಳನ್ನೆಲ್ಲ ಬಯಸುವವನೇನು? ಇಲ್ಲ, ಇಲ್ಲವೇ ಇಲ್ಲ. 'ಅವೆಲ್ಲ ನನ್ನ ಸೃಷ್ಟಿ ತಾನೇ? ನನ್ನದನ್ನೇ ನಿನ್ನದಾಗಿಸಿ ನನಗೆ ಕೊಡುವ ಕೃತಿ ಚೌರ್ಯ ಯಾಕೆ? ನನಗೆ ನಿನ್ನ ಸ್ವಂತಿಕೆಯ ಕೊಡುಗೆ ಬೇಕು' ಎಂಬುದೇ ಆ ದೇವರ ಇರಾದೆ.

# ಸಾರ್ಥಕ ಸೇವೆಯ

**ಸಾಮಾನ್ಯವಾಗಿ ಪ್ರಚಲಿತವಾಗಿರುವ ವಿವಿಧ ಸೇವಾ ವಿಧಾನಗಳನ್ನಿಲ್ಲಿ ಪ್ರಸ್ತಾಪಿಸಿ ಅವುಗಳ ಅಂತರ್ಯದ ವಿಶ್ವರೂಪದರುಶನವನ್ನೇ ಪ**

| ಕ್ರಮ ಸಂಖ್ಯೆ | ಸೇವೆ | ಅರ್ಥ-ಉದ್ದೇಶ | ಏನಾಗಿದೆ ? | ಏನಾಗಬೇಕು ? | ದೇವರ ಒಲುಮೆಗೆ ಎಷ್ಟು ಸಹಕಾರಿ ? | ಹೇಗೆ ಸಹಕಾರಿ ? |
|---|---|---|---|---|---|---|
| 1. | ಹಣ್ಣುಕಾಯಿ | ಬಂಧಿಸುವ 9 ಮಂದಿಯ ಅರ್ಪಣೆ; ಸಂಕುಚಿತತೆ, ಸ್ವಾರ್ಥತೆ, ಸ್ವೈರತೆ ಸೊನ್ನೆಯಾಗುವಿಕೆ; ಪ್ರಸಾದ ಎಂದು ಸೇವಿಸಿ ನವಶಕ್ತಿ ಸ್ಫೂರ್ತಿ ಪಡೆಯುವ ಇಂಗಿತ. | 'ಕಾಟಾಚಾರಕ್ಕಾಗಿ ಅರ್ಪಿಸುವೆ, ಇತರರ ಟೀಕೆ ತಪ್ಪಿಸಲು ಅರ್ಪಿಸುವೆ, ಬೆಳ್ಳಿ ಬುಟ್ಟಿ, ಚಿನ್ನದ ಹರಿವಾಣ ಮುಖ್ಯವಾಗಿದೆ, ಎಲ್ಲರೂ ಮಾಡುವಂತೆ ನಾನು ಮಾಡುವುದು – ಅಷ್ಟೇ.' | ಪ್ರಾರ್ಥನೆಯ ಅಂತರಾಳ ಬಲವಾಗಲಿ ! ಅರ್ಪಿಸುವವರೂ ಬೇಡುವಂತಾಗಲಿ ! ಅರ್ಥವತ್ತಾಗಿಯೇ ಅರ್ಪಣೆ ನಡೆಯಲಿ ! | 5% | ಬಂಧಿಸುವ 9 ಮಂದಿ ಹದವಾಗಲು |
| 2. | ಕರ್ಪೂರಾರತಿ, ಸೋಣೆ ಆರತಿ, ದೀಪಾರತಿ | ಅಹಂಭಾವವೆಲ್ಲ ಕರ್ಪೂರದಂತೆ ನಾಶವಾಗಿದೆ, ಬೆಳೆಯಿಸುವ 12 ಮಂದಿ ನವಚೈತನ್ಯದಿಂದ ಬೆಳಗುತ್ತಿದಂತೆ, ವಿವೇಕ-ವೈರಾಗ್ಯದ ಜ್ಯೋತಿ ಸದಾ ಪ್ರಜ್ವಲಿಸುತ್ತಿದೆ. | ಕಟ್ಟುಕಟ್ಟಳೆ ಎಂದಾಗಿದೆ, ಅತಿ ಕಡಿಮೆ ಖರ್ಚಿನ ಸೇವೆ ಆಗಿ ಅತಿ ಪ್ರಚಲಿತವಾಗಿದೆ. | ಅರ್ಥ-ಉದ್ದೇಶವನ್ನು ಚೆನ್ನಾಗಿ ಮನಗಾಣಿಸು ವಂತಾಗಬೇಕು. ದೇವರ ಮುಂದೆ ಪ್ರತಿಜ್ಞೆ ತೆಗೆದು ಕೊಳ್ಳುವಂತಾಗಬೇಕು. | 10% | ಜ್ಞಾನ, ವಿವೇಕ, ವೈರಾಗ್ಯ ಬೆಳಗಿಸಲು |
| 3. | ಬಿಲ್ವ, ತುಳಸಿ, ದೂರ್ವ ಅರ್ಚನೆ | ಭಗವಂತನ ನಾಮ ಮನದಲ್ಲಿ ಹಸಿರಾಗಿ ಉಳಿದಿದೆ, ಅಹಂಭಾವ ಗರಿಕೆಯಂತೆ ನೆಲಕ್ಕೆ ಕಚ್ಚಿ ಅಪ್ಪಚ್ಚಿ ಆಗಿದೆ, ಕೃಪಾತುರತೆ ತುಳಸಿಯಂತೆ ಮನದ ಮುಂದುಗಡೆಯೇ ಇದೆ, ಮನಸ್ಸು-ಬುದ್ಧಿ-ಚಿತ್ತದಲ್ಲಿ ನಾಮ-ರೂಪ-ಗಾನ ಹಸಿರಾಗಿದೆ. | ತೋರಿಕೆಯ ಸೇವೆಯಾಗಿದೆ, ಮಹತ್ತೆಂಬ ಅರ್ಥದಲ್ಲಿ ಜನಸೇರಿಸುವ ಮಾಧ್ಯಮವಾಗಿದೆ, ವಿಶಿಷ್ಟ ದಿನಗಳಲ್ಲಿ ಮಾತ್ರವೇ ಎಂದು ತಪ್ಪಾಗಿ ತಿಳಿದಂತಿದೆ. | ಒಳಾರ್ಥವನ್ನೂ ಸ್ಪಷ್ಟವಾಗಿ ಗ್ರಹಿಸಿ, ಆ ನಿಟ್ಟಿನಲ್ಲಿ ಪ್ರತಿಜ್ಞೆ ತೆಗೆದುಕೊಂಡೇ ಆರಾಧಿಸುವಂತಾಗಬೇಕು. | 5% | ಭಗವದ್‌ಭಾವ ಹಸಿರಾಗಲು |
| 4. | ಪಂಚಾಮೃತ ಅಭಿಷೇಕ, ಮುಡಿಕಡಬು ಸೇವೆ, ಹರಿವಾಣ ನೈವೇದ್ಯ, ಪಂಚಕಜ್ಜಾಯ | ತ್ಯಾಗ-ಸೇವೆಯ ಗಣಿಯಾಗುವ ಪ್ರತೀಕ ಹಾಲು, ತುಪ್ಪ, ಸಕ್ಕರೆ, ಜೇನು, ಮೊಸರು ಸೇವೆ; ಅಹಂಭಾವ 'ಸೊನ್ನೆ' ಮಾಡಿಕೊಳ್ಳುವ ದಿಸೆಯಲ್ಲಿ ಸಮರ್ಪಣೆ; ಪರೋಪಕಾರ ಪ್ರತೀಕವಾಗಿ ಸಕ್ಕರೆ-ಬೆಲ್ಲ-ಕಬ್ಬು-ಕಾಯಿ-ಹಣ್ಣು ಅರ್ಪಣೆ. | ಅವಸರವಸರದ ಕಾರ್ಯವಾಗಿದೆ. ದಿಢೀರಾಗಿ ನಡೆಯುವ ಸೇವೆಯಾಗಿದೆ. | ಒಳಗಿನ ಮರ್ಮವನ್ನು ತಿಳಿಸಿ ಹೇಳುವ ಫಲಕವೋ, ವ್ಯವಸ್ಥೆಯೋ ಇರಬೇಕು. | 5% | ಅಹಂಭಾವ ಜಜ್ಜಲ್ಪಡಲು |
| 5. | ಹೂವಿನ ಪೂಜೆ | ಹೃನ್ಮನ ಸದ್ಗುಣಗಳಿಂದ, ಸದ್ವಿಚಾರಗಳಿಂದ ಅರಳಿದೆ, ವ್ಯಕ್ತಿತ್ವ ಮಾಗಿ ಸೌರಭ ಬೀರುತ್ತಿದೆ, ಸೌಹಾರ್ದ, ಸಾಮರಸ್ಯ ಕಂಗೊಳಿಸುತ್ತಿದೆ. | ತೋರಾಣಿಕೆಯ, ಸಿರಿವಂತಿಕೆಯ ಪ್ರದರ್ಶನವಾಗಿದೆ. ಅವರಿವರ ಮಧ್ಯೆ ಮೆರೆಯುವ ಸಂದರ್ಭವಾಗಿದೆ. | ಹಣದ ವ್ಯರ್ಥ ಅಪವ್ಯಯ ನಿಲ್ಲಬೇಕು. ಅಂತರಂಗದ ಪರಿವರ್ತನೆ ನನಸಾಗಬೇಕು. | 3% | ವಿಶಾಲ ಮನಸ್ಸು, ಉದಾರ ಹೃದಯ ಕಂಗೊಳಿಸಲು |
| 6. | ರಥೋತ್ಸವ, ಬ್ರಹ್ಮೋತ್ಸವ | ಹೃದಯ ಮಂದಿರದಲ್ಲಿ ದೇವರಿಗೆ ವಿಶೇಷ ಆರಾಧನೆ, ಕರ್ಮೇಂದ್ರಿಯಗಳು ಆ ದೇವರ ಸೇವೆಗೇನೇ ಮೀಸಲು. ಆ ದೇವರ ಗಾನ-ಧ್ಯಾನವೇ ನಿತ್ಯೋತ್ಸವ. | ಶ್ರೀಮಂತಿಕೆಯ ಪುಕ್ಕಟೆ ಪ್ರದರ್ಶನ, ದೇವರ ಭಂಡಾರದ ಆಭರಣಗಳ ಪ್ರದರ್ಶನ, ಸಾಮಾನ್ಯ ಭಕ್ತರಿಗೆಲ್ಲ ಬರೀ ಕನಸು. | ಹೊರಗಿನ ವೈಭವ ಮುಖ್ಯವಲ್ಲ, ಒಳಗಿನ ವೈಭವವೇ ಅತಿ ಅತಿ ಮುಖ್ಯ ಎಂಬುದು ಸ್ಪಷ್ಟವಾಗಬೇಕು. | 7% | ಭಕ್ತಿ, ವಿಧೇಯತೆ, ಏಕನಿಷ್ಠೆ ಹೆಚ್ಚಲು |

ಸಿಪ್ಪೆಗಂಟಿಕೊಂಡಂತಾಗಿದೆ. ಅರ್ಥವನ್ನು ಗ್ರಹಿಸದೆ ಕೇವಲ ಬಾಹ್ಯಾಡಂಬರಕ್ಕಾಗಿ ಗೈಯುವ ಇಂಥ ಸೇವೆಗಳಿಂದ ಕೃಪೆ ಅಲ್ಲ, ಅವಕೃಪೆಯೇ ದೊರೆಯು ವಂತಾಗಿದೆ. ಹೀಗೆ ಹಿಂದೂಗಳ ಪಾಲಿಗೆ ಮಾಡಿಯೂ ಮಾಡದ ದೋಷ ತಟ್ಟುವಂತಾಗಿದೆ. ಕೇಳಿದ ಪ್ರಶ್ನೆಗೆ ಉತ್ತರ ಬರೆಯದೆ ಗೊತ್ತಿರುವ ಯಾವುದೋ ಉತ್ತರ ಪಾರ್ಕ್‌ನಲ್ಲಿ ಅಂಥ ಸೇವೆಗಳಿಗೆ ಆಸ್ಪದ ನೀಡಿಲ್ಲ, ಅಂಥ ಸೇವಾಫಲಕಗಳನ್ನು ಹಾಕಿಸಿಲ್ಲ. ಬದಲಿಗೆ ಸೇವಾಸಾಮ್ರಾಜ್ಯದ ತಿರುಳನ್ನೇ ಅಭಿವ್ಯಕ್ತಗೊಳಿಸುವ 'ನನ್ನನಳಿಸು, ನಿನ್ನ ಮೆರೆಸು, ಬಂದು ನೆಲಸು, ಹೃದಯ ಪದ್ಮದಲದಲಿ' ಎಂಬ ಫಲಕವನ್ನೇ ಹಾಕಿಸಿರುವೆ.

ಅಂಥ ಸ್ವಂತ ಸೃಷ್ಟಿ ಬಂಧಿಸುವ 9 ಮಂದಿ ಪ್ರೇರಿತ 'ನಾನು' ಭಾವ. ಆದ್ದರಿಂದ ಮೌನವಾಗಿ ಮನಸ್ಸನ್ನು ಅಂತರ್ಮುಖವಾಗಿಸಿ ಭಕ್ತಿ, ಶ್ರದ್ಧೆ, ವ್ಯಾಕುಲತೆಗಳಿಂದ ಕಣ್ತುಂಬಿ ಮೊರೆಯಿಡುತ್ತ, ಶರಣಾಗಿ ಸಾಷ್ಟಾಂಗ ನಮಿಸುತ್ತ ' 'ಕಸ' ಸ್ವೀಕರಿಸಿ 'ರಸ' ಕರುಣಿಸಲಾರೆಯಾ?' ಎಂದೇ ಆ ದೇವ

ರೊಡನೆ ಪ್ರೇಮಕಲಹಕ್ಕೆಳಸುವುದೇ ಇಲ್ಲಿನ ದೊಡ್ಡ ಸೇವೆ. ಜೊತೆಗೆ 'ವಿವೇಕ ಸಂಪದ', 'ವಿವೇಕ ವಾಹಿನಿ' ಸದ್ಗ್ರಂಥಗಳ ಪ್ರಚಾರ–ಪ್ರಸಾರದ ಮೂಲಕ ಜನಮನದ 'ಕಳೆ' ತೆಗೆದು ಸದ್ವಿಚಾರದ 'ಬೆಳೆ' ಬೆಳೆಯಿಸಿ ಅವರ ಬಾಳನ್ನು ಬೆಳಗಿಸುವುದೇ ಇಲ್ಲಿನ ಮಹಾಸೇವೆ.

ಅದರ ಸಾಮಗ್ರಿಗಳನ್ನು ತಯಾರಿಸಿದವರು ನೀವಲ್ಲ ತಾನೇ ? ಆದ್ದರಿಂದ ಆ ಸೇವೆಯ ಸಾರ್ಥಕತೆಯಲ್ಲಿ ಆ ಸೇವಾಸಾಮಗ್ರಿಗಳನ್ನು ತಯಾರಿಸಿದವರೆಲ್ಲರಿಗೂ ಅವರವರ ಭಾವಕ್ಕನುಗುಣವಾಗಿ ಪಾಲಿದೆ.
ಹೀಗೆ,
1) ಹಣ್ಣುಕಾಯಿ ಸೇವೆಯಲ್ಲಿ–

ಸೊನ್ನೆಯಾಗುವಂತೆ ಹರಸು ತಂದೇ' ಎಂದು ಬೇಡಿದಲ್ಲಿ ಮಾತ್ರ ಶೇ. 15 ಕೃಪೆ, (iv) ಅದನ್ನು ಮಾರಾಟ ಮಾಡಿದವನಿಗೆ– 'ಹೇ ಪ್ರಭು, ನನ್ನದಲ್ಲ ಇದು, ನಿನ್ನದೇ. ಅದನ್ನೇ ಈಗ ಮಾರುತ್ತಿರುವೆ, ಮನ್ನಿಸಿ, ಮುನ್ನಡೆಸಿ, ದಾರಿ ತೋರಿ' ಎಂದು ಬೇಡಿದಾಗ ಮಾತ್ರ ಶೇ. 10 ಕೃಪೆ.

# ...ರಥಿಗಳು ನೀವಾಗಿ!

**...ವಾಗಿದೆ. ಇನ್ನಾದರೂ ಅಂಥ ಸೇವೆಯ ಅರ್ಥ-ಉದ್ದೇಶ ಅರಿತು ಆಚರಿಸಿ ವಿಶೇಷ ದೈವಕೃಪೆಗಳಿಸುವ ಸಾರ್ಥಕ ಸಾಧಕರು ನೀವಾಗಬೇಕು.**

| ಕ್ರಮ ಸಂಖ್ಯೆ | ಸೇವೆ | ಅರ್ಥ-ಉದ್ದೇಶ | ಏನಾಗಿದೆ ? | ಏನಾಗಬೇಕು ? | ದೇವರ ಒಲುಮೆಗೆ ಎಷ್ಟು ಸಹಕಾರಿ ? | ಹೇಗೆ ಸಹಕಾರಿ ? |
|---|---|---|---|---|---|---|
| 7. | ಉರುಳು ಸೇವೆ | ದೇವರ ಸನ್ನಿಧಿಯಲ್ಲಿ 'ಸೊನ್ನೆ'ಯಾಗಿಯೇ ಸದಾ ಉರುಳುವವನೆಂದರ್ಥ. 'ಸನ್ನೆ'ಯಾದ ದೇವರೇ ಸದಾ ಶಕ್ತಿ ತುಂಬಿ ಮುನ್ನಡೆಸುವವನೆಂದೂ ಅರ್ಥ, ಸಂಚಿತ ಕುಕರ್ಮವನ್ನು ದೇವರೆದುರು ಕೊಡಹಿ ಖಾಲಿ ಮಾಡಿದನೆಂದೂ ಅರ್ಥ. | ತೋರಿಕೆಗಾಗಿ ಮಾತ್ರ ಉಳಿದಿದೆ. ಜನರೆಲ್ಲ ನೋಡಬೇಕು, ನೋಡಿ ಮೆಚ್ಚಬೇಕು ಎಂದೇ ಆಗಿದೆ. | ಒಳಗಿನ ಮಹತ್ತಾದ ಉದ್ದೇಶವನ್ನು ಮನದಟ್ಟು ಮಾಡುವ ಕೆಲಸ ಮೊದಲು ಆಗಬೇಕು. | 8% | ಭಕ್ತಿ, ಶ್ರದ್ಧೆ, ಶರಣಾಗತಿ ಹೆಚ್ಚಲು |
| 8. | ಮುಡಿಸೇವೆ | ಕುಕರ್ಮದ, ತಮಸ್ಸಿನ ಎಲ್ಲ ಅಂಶವನ್ನೂ ದೇವರಿಗೆ ಸಮರ್ಪಿಸಿ ಸತ್ಕರ್ಮ ಮಾಡುತ್ತಲೇ ಕಷ್ಟನಷ್ಟಗಳ ಬಗ್ಗೆ ಚಿಂತಿಸದೇನೇ ಹೊಸ ಧೈರ್ಯೋತ್ಸಾಹದಿಂದ ಬದುಕಿನಲ್ಲಿ ಮುನ್ನುಗ್ಗುವುದು. | ಅತ್ಯಂತ ಮೋಜಿನ ಸೇವೆಯಾಗಿದೆ, ಕ್ಷುಲ್ಲಕ ರೀತಿಯ ಸೇವೆ ಎಂದೆನಿಸಿದೆ. | ಸೇವೆಯ ಒಳಗುಟ್ಟನ್ನು ಬಯಲು ಮಾಡಿ, ಮತ್ತೆಲ್ಲ ಬಾಳಿನ ಕಷ್ಟನಷ್ಟಗಳಿಗೆ ಅಂಜಬಾರದು, ಎಂದಿಗೂ ದೈವನಿಂದೆ ಮಾಡಬಾರದು ಎಂಬುದನ್ನೂ ಖಾತ್ರಿ ಮಾಡುವಂತಾಗಬೇಕು. | 2% | ವಿಧೇಯತೆ, ಶರಣಾಗತಿ, ಏಕಾಗ್ರತೆ ಹೆಚ್ಚಲು |
| 9. | (ಚಂಡಿಕಾ) ಹೋಮ | ಮನದಲ್ಲಿರುವ ದುರ್ಭಾವನೆಗಳೆಲ್ಲ ಹೋಗಲಿ ಮನದಿಂದ ಎಂಬ ಬೇಡಿಕೆ, ಹೋದ ಸದ್ಭಾವನೆಗಳು ಮನ ಸೇರಲಿ ಎಂಬ ಭಾವ. | ಸಿರಿವಂತರ ವಿಶಿಷ್ಟ ಸೇವೆ ಆಗಿದೆ, ದೇವರೊಲಿಯಲೇ ಬೇಕು ಎಂಬಂತೆ ಪ್ರತೀತಿಯೂ ಹುಟ್ಟಿದೆ. | ಅಂತರಂಗದ 9 ಮಂದಿ, 12 ಮಂದಿಯ ವಿವರ ತಿಳಿದು ಅಂತಃಶುದ್ಧಿಯ ಹಿನ್ನೆಲೆಯ ಬಗ್ಗೆ ಸ್ಪಷ್ಟ ಚಿತ್ರಣ ಮೂಡಬೇಕು. | 5% | ಭಕ್ತಿ, ಶ್ರದ್ಧೆ, ವ್ಯಾಕುಲತೆ ಹೆಚ್ಚಲು |
| 10. | ಕುಂಕುಮಾರ್ಚನೆ | ರಕ್ತಗತವಾಗಿದೆ ದೈವೀಭಾವ, ದೇವರಿಂದಲೇ ಎಲ್ಲವೂ ಎಂಬುದು ರಕ್ತದ ಕಣಕಣದಲ್ಲೂ ಸೇರಿ ಹೋಗಿದೆ, 'ಶೂನ್ಯ' ಸಂಪಾದನೆ ಯಶಸ್ವಿಯಾಗಿದೆ. | ಹಲವರ ಹೆಸರಿನಲ್ಲಿ ಒಮ್ಮೆಲೇ ನಡೆಯುವ ಅವರಸರದ ಸೇವೆಯಾಗಿದೆ, ನಿತ್ಯದ ಸಾಮಾನ್ಯ ಕಟ್ಟುಕಟ್ಟಳೆಯಾಗಿದೆ. | ಶ್ರದ್ಧಾಭಕ್ತಿಯೊಂದಿಗೆ ಆಂತರಿಕ ಮಹಿಮೆಯನ್ನು ತಿಳಿಸಿಯೇ ನಡೆಸುವ ಘನ ಸೇವೆ ಆಗಬೇಕು. | 30% | ಏಕಾಗ್ರತೆ, ಏಕನಿಷ್ಠೆ, ವ್ಯಾಕುಲತೆ ಹೆಚ್ಚಲು |
| 11. | ಸಹಸ್ರ ನಾರಿಕೇಳ ಅಭಿಷೇಕ | ಎಳನೀರಿನಂತೆ ಕೃಪಾಸವಿಯನ್ನೇ ಹಂಚುತ್ತ ಇಷ್ಟದೇವರ ಆಧಾರದಲ್ಲೆ ತ್ರಿಕರಣ ಪೂರಕ ಶುದ್ಧಿಯೊಂದಿಗೆ ಬದುಕುವ ಪ್ರತಿಜ್ಞೆ ಇಲ್ಲಿ ಮುಖ್ಯ. | ಜನಸಮೂಹವನ್ನು ಸೇರಿಸುವ ಸಂಭ್ರಮವೇ ಮುಖ್ಯವಾಗಿದೆ. | ಅನ್ವರ್ಥವಾಗಿಯೇ ಮಾತು-ಕೃತಿ, ನಡೆನುಡಿಯಲ್ಲಿ 'ಸೊನ್ನೆ' ಭಾವ ಸದಾ ಬಿಂಬಿತವಾಗಬೇಕು. | 10% | ಭಕ್ತಿ, ಶ್ರದ್ಧೆ, ಶರಣಾಗತಿ ಹೊಮ್ಮಲು |
| 12. | ಸಹಸ್ರ ಕುಂಭಾಭಿಷೇಕ | ಹೃನ್ಮನಗಳ 'ಕೊಳೆ'ಯನ್ನೇ ಅರ್ಪಿಸಿ ಸದ್ಗುಣಗಳನ್ನು ತುಂಬಿಕೊಳ್ಳುವ ಪಣತೊಡುವುದು. | ಹಣ ಮಾಡಲೂ, ಜನರನ್ನೂ ಆಕರ್ಷಿಸಲೂ ಪವಾಡ ಸದೃಶವಾಗಿ ಉಪಯೋಗವಾಗುತ್ತಿದೆ. | ಆಧ್ಯಾತ್ಮಿಕತೆಯ ಅಂತರಾರ್ಥವೇ ಬಿಂಬಿತವಾಗಿ ಜಡ ಕುಂಭ (ಕಲಶ) ಎಂದರೆ ಜೀವಂತ ಹೃನ್ಮನದ ಪ್ರತೀಕ ಎಂದಾಗಬೇಕು. | 10% | ಭಕ್ತಿ, ವಿಧೇಯತೆ, ಶರಣಾಗತಿ, ಏಕನಿಷ್ಠೆ, ಹೊಮ್ಮಲು |

### ಕೃಪೆಯ ತೆರೆಮರೆ

ಉಳಿದ ದೇಗುಲಗಳಲ್ಲಿ ನೀವು ಗೈಯುವ ಸೇವೆಯನ್ನು ಅದರ ಹಿಂದಿನ ಅರ್ಥ ಗ್ರಹಿಸಿ ವ್ಯಾಕುಲ ಮೊರೆಯೊಂದಿಗೆ ಸಲ್ಲಿಸಿದಲ್ಲಿ ಮಾತ್ರ ನಿಮ್ಮ ಪಾಲಿಗೆ ಕೃಪೆ ದೊರೆಯುತ್ತದೆ. ಆದರೆ ಒಂದು ಮಾತು–ಸೇವೆ ಸಲ್ಲಿಸುವವರು ನೀವಾದರೂ

(i) ಖರೀದಿಸಿದವನಿಗೆ–'ಸೊನ್ನೆ' ಭಾವದಿಂದ ಅರ್ಪಿಸಿದಾಗ ಮಾತ್ರ ಶೇ. 50 ಕೃಪೆ, (ii) ಅದನ್ನು ಬೆಳೆಸಿದವನಿಗೆ– 'ಹೇ ದೇವಾ, ನಿನ್ನದೇ ಮಣ್ಣಿನಲ್ಲಿ ಬೆಳೆದ ಇದು ನಿನ್ನದೇ' ಎಂದು ಬೇಡಿದಲ್ಲಿ ಮಾತ್ರ ಶೇ. 25 ಕೃಪೆ, (iii) ಅದನ್ನು ಒಡೆದವನಿಗೆ– 'ಹೇ ದೇವಾ, 'ಶೂನ್ಯ' ಭಾವದ ಈ ಭಕ್ತರು ಇನ್ನಷ್ಟು

2) ದೇವರ ಮಂಗಳಾರತಿ ಸೇವೆಯಲ್ಲಿ–
(i) ಹಣ ಕಟ್ಟಿದಾತನಿಗೆ– 'ಹೇ ಪ್ರಭೂ, ನಿಮ್ಮ ಪ್ರಭೆ ಕಂಡು ಧನ್ಯನಾದೆ, ನಿಮ್ಮ ನಾಮ ಸದಾ ಮನದಲ್ಲಿರುವಂತೆ ಹರಸಿ' ಎಂದು ಬೇಡಿದಾಗ ಮಾತ್ರ ಶೇ. 30 ಕೃಪೆ, (ii) ಎಣ್ಣೆ, ಬತ್ತಿ ತಂದವನಿಗೆ– 'ಹೇ ತಂದೆ, ನನ್ನತನವನ್ನು ಬೇಗ ಸೊನ್ನೆ

ಮಾಡಿ ಹರಸಿ' ಎಂದು ಬೇಡಿದರೆ ಮಾತ್ರ ಶೇ. 5 ಕೃಪೆ. (iii) ಎಣ್ಣೆ, ಬತ್ತಿ ಮಾಡಿದವರಿಗೆ– 'ದೇವರಿಗಾಗಿ ಇದನ್ನು ತಯಾರಿಸುತ್ತಿರುವೆ' ಎಂಬ ನಮ್ರತೆ ಇದ್ದರೆ ಮಾತ್ರ ಶೇ. 5 ಕೃಪೆ. (iv) ಬತ್ತಿ ಹಾಕಿದವರಿಗೆ– 'ನನ್ನೀ ಅಳಿಲಸೇವೆ ಪಡೆದು ಅಂತರ್ಯ ಬೇಗ ಬೆಳಗಿಸು ಪ್ರಭೂ' ಎಂಬ ಬೇಡಿಕೆ ಇದ್ದರೆ ಮಾತ್ರ ಶೇ. 6 ಕೃಪೆ. (v) ಆರತಿ ಹಚ್ಚಿ ಕೊಟ್ಟವರಿಗೆ– 'ಹೇ ದೇವಾ, ನನ್ನ ಪಾಲಿನ ಈ ಚಿಕ್ಕ ಸೇವೆಯಿಂದ ನನ್ನ ಅಂತರ್ಯದ ಕತ್ತಲು ನೀಗಲ್ಪಡಲಿ' ಎಂಬ ನಮ್ರ ಮೊರೆಯಿದ್ದರೆ ಮಾತ್ರ ಶೇ. 4 ಕೃಪೆ. (vi) ಆರತಿ ಎತ್ತಿದ ಅರ್ಚಕನಿಗೆ– 'ನಿನ್ನನ್ನು ಬೆಳಗಿಸುವ ಈ ಸೇವೆ ಮಾಡುತ್ತಿರುವೆ. ನಾನು ಎಂದೆಂದೂ ನಿನ್ನವನೇ, ಕೃಪೆದೋರಪ್ಪಾ' ದೇವಾ, ಈ ಹೂವಿನಂತೆ ನನ್ನಲ್ಲೀಗ ಸದ್ಗುಣಗಳು ಅರಳಿವೆ, ಇತರರಿಗೆ ನನ್ನ ವರ್ತನೆಯಿಂದ ನಲಿವುಂಟು ಮಾಡುವಂತೆ ಹರಸು' ಎಂಬ ಮೊರೆ ಇದ್ದಲ್ಲಿ ಶೇ. 25 ಕೃಪೆ. (ii) ಆ ಹೂವನ್ನು ಮಾರಿದವನಿಗೆ– 'ದೇವರ ಪವಿತ್ರ ಪೂಜೆಗಾಗಿಯೇ 'ಸೊನ್ನೆ'ಯಾಗಿ ಈ ಹೂ ಮಾರುತ್ತಿರುವೆ. 'ಹೇ ದೇವಾ, ಮನ್ನಿಸಿ, ಮುನ್ನಡೆಸಿ, ದಾರಿ ತೋರಿ' ಎಂಬ ಬೇಡಿಕೆಯಿದ್ದರೆ ಮಾತ್ರ ಶೇ. 20 ಕೃಪೆ. (iii) ಹೂವನ್ನು ಬೆಳೆಸಿದವನಿಗೆ– 'ಹೇ ದೇವಾ, ನಿನ್ನದೇ ಮಣ್ಣಿನಲ್ಲಿ ನಿನ್ನದೇ ನೀರನ್ನು ಹಾಕಿ ನಿನಗೆಂದೇ ಬೆಳೆಯಿಸಿರುವೆ. ನಿನ್ನ ಮುಡಿಗೇನೇ ಈ ಹೂ ಸೇರಲಿ' ಎಂಬ ಮೊರೆಯಿದ್ದಲ್ಲಿ ಮಾತ್ರ ಶೇ. 50 ಕೃಪೆ. (iv) ಅಲಂಕಾರ ಮಾಡಿ ದೇವರಿಗದನ್ನು ಮಾತ್ರ ಅವರಿಗೆ ಶೇ. 25 ಕೃಪೆ. (iii) ಹೋಮದ ಎಲ್ಲ ಸಾಮಗ್ರಿಗಳನ್ನು ಸರಬರಾಜು ಮಾಡಿದವನಿಗೆ, ವ್ಯವಸ್ಥೆ ಮಾಡಿದವರಿಗೆ ಅವರ 'ಶೂನ್ಯ' ಭಾವಕ್ಕನು ಗುಣವಾಗಿ ಹೆಚ್ಚೆಂದರೆ ಶೇ. 20 ಕೃಪೆ. (iv) ಯಾರು ಹೋಮವನ್ನು ನೆರವೇರಿಸುತ್ತಾರೋ, ಅವರ ಶ್ರದ್ಧಾಭಕ್ತಿನುಗುಣವಾಗಿ ಹೆಚ್ಚೆಂದರೆ ಶೇ. 5 ಕೃಪೆ.

### ದೇವರು ಬಯಸುವ ಸೇವೆ

ಅಂತೂ ಗೈದ ಸೇವೆಯ ಫಲ ಅವರಿವರಿಗೆ ಹಂಚಿಹೋಗದೆ ಸಂಪೂರ್ಣ ನಿಮಗೇ ಸಿಗಲು ನೀವು ಈ ಮೊದಲೇ ಹೇಳಿದಂತೆ ನಿಮ್ಮದಾದ 'ನಾನು' ಭಾವ ಸಮರ್ಪಣೆಯ ಸೇವೆಯನ್ನೇ

## ಸೇವೆಯ ಅಂತರಾರ್ಥ –'ನನ್ನ ಹರಣ, ನಿನಗೆ ಶರಣ'

ನನ್ನನಳಿಸು!
ನಿನ್ನ ಮೆರೆಸು!
ಬಂದು ನೆಲೆಸು–
ಹೃದಯ ಪದ್ಮದಲದಲಿ...

ದೇವರೆದುರು ಸಾಷ್ಟಾಂಗ ನಮಿಸುವ ಉದ್ದೇಶ 'ನಾನು' ಭಾವದ 'ಕಸ'ವನ್ನು ಆ ದೇವರಿಗೆ ಅರ್ಪಿಸಲೆಂದೇ. ಕಸದ ಬುಟ್ಟಿಯನ್ನು ಕವುಚಿ ಹಿಡಿದಾಗಷ್ಟೇ ಅದರ ಕಸವೆಲ್ಲ ಹೊರಹೋಗುವಂತೆ ಸಾಷ್ಟಾಂಗ ನಮಿಸುವಾಗ ಸಂಪೂರ್ಣ ಶರಣಾಗತಿಯ ಭಾವವಿದ್ದಲ್ಲಿ ಮಾತ್ರ ಬಂಧಿಸುವ 9 ಮಂದಿಯಿಂದಾದ ಭಾವನಾತ್ಮಕ 'ಕಸ' ಹೊರ ಹರಿಯುತ್ತದೆ. ಆಗ ಆ ಜಾಗವನ್ನು ತುಂಬಲು ಆ ದೇವರೇ ಮುಂದಾಗುತ್ತಾನೆ. ಆ ದೇವರು ಅಂತರ್ಯದಲ್ಲಿ ಬಂದು ನೆಲಸುವುದರಿಂದ ಆನಂದ, ಶಾಂತಿಗಳೆಲ್ಲ ಉಕ್ಕುತ್ತವೆ. ಆದರೆ ಭಾವನಾತ್ಮಕ ವಲಯದ ಕೀಲಿಕೈ ಇರುವುದು ಆ ಭಗವಂತನೊಡನೆಯೇ. ಭಗವಂತನು ಶರಣಾಗತಿ ಭಾವವನ್ನು ಬಲಿಸಿ, 'ನಾನು' ಭಾವವನ್ನು ಹಿಂಗಿಸಿ ಕೃಪೆದೋರದಿದ್ದರೆ 'ನಾನು' ಭಾವವನ್ನು ನೀಗಿಸಿಕೊಳ್ಳುವ ಮಾತು ದೂರವೇ ಉಳಿಯುತ್ತದೆ. ಆದ್ದರಿಂದ ಆ ದೇವರಡಿಗಳಲ್ಲಿ ಸಂಪೂರ್ಣ ಶರಣಾಗಿ 'ನಾನು' ಭಾವವನ್ನಳಿಸಿ ಎದೆಗುಡಿಯಲ್ಲಿ ಬಂದು ನೆಲೆಸೆಂದು ಭಕ್ತಿ, ಶ್ರದ್ಧೆ ವ್ಯಾಕುಲತೆಗಳಿಂದ ಕಣ್ತುಂಬಿ ಬೇಡುವುದರಿಂದಲೇ ಆ ದೇವರ ಕೃಪೆ ದೊರೆತು ಆನಂದ, ಶಾಂತಿಗಳು ಉಕ್ಕುವಂತಾಗುತ್ತವೆ. ಯಥಾರ್ಥವಾಗಿ ಸೇವೆಯಿಂದಾಗಬೇಕಾದ ಕೆಲಸವೂ ಇದೇನೇ. ಆದರೆ ಸೇವೆಯ ಸಾಧನ, ಪರಿಕರಗಳ ಗೋಜಲಿನಲ್ಲಿ ಆ ಉದ್ದೇಶವೇ ಮರೆಯಾಗಿ ಸೇವೆ ಸಾರ್ಥಕವಾಗದಂತಾಗುತ್ತಿದೆ. ದಿವ್ಯಸ್ ಪಾರ್ಕ್‌ನಲ್ಲಿ ಹಾಗಾಗಬಾರದೆಂದೇ ಸೇವೆಯ ಆ ಪರಮೋದ್ದೇಶವನ್ನೇ ಭಕ್ತರಿಗೆ ಮನದಟ್ಟು ಮಾಡಿಸಿ ಅಂಥ ಸೇವೆಗೇ ಭಕ್ತರನ್ನು ಅಣಿಗೊಳಿಸಲೆಂದೇ ದಿವ್ಯಸ್‌ಪಾರ್ಕ್‌ನ ಎದುರೇ 'ನನ್ನಳಿಸು, ನಿನ್ನ ಮೆರೆಸು, ಬಂದು ನೆಲಸು, ಹೃದಯ ಪದ್ಮದಲದಲಿ!' ಎಂಬ ಫಲಕ ಇದೆ. ದೇವರಿಗೆ ಸಲ್ಲಿಸಬೇಕಾದ ಯಾವತ್ತೂ ಸೇವೆಯ ಜೀವಾಳವನ್ನೇ ಪ್ರತಿಬಿಂಬಿಸುವ ಈ ಫಲಕ ಆ ದೇವರ ಅಮೂಲ್ಯಕೃಪೆ ಪಡೆಯಲು ಸಲ್ಲಿಸಬೇಕಾದ ಖರ್ಚಿಲ್ಲದ ಸೇವೆಯನ್ನು ಉಲ್ಲೇಖಿಸುತ್ತದೆ. ನಿಜವಾಗಿಯೂ ಇದು ಪರಮ ಸೇವಾಫಲಕ. ಆದರೆ ಅಗ್ಗದಲ್ಲಿ ಸಿಗುವುದು ಒಳ್ಳೆಯ, ಉತ್ತಮ ಸರಕಲ್ಲ ಎಂಬ ಮೂಢನಂಬಿಕೆ ಬೆಳೆಸಿಕೊಂಡ ಜನರಿಗೆ ಈ ಫಲಕ ಸರಳವಾದುದರಿಂದಲೇ ಮಹತ್ತ್ವದ್ದಾಗಿ ಕಾಣಿಸುತ್ತಿಲ್ಲ ಅಷ್ಟೇ. ಭಾರೀ ಅಶ್ವತ್ಥವೃಕ್ಷವೆಲ್ಲ ಚಿಕ್ಕಬೀಜದಲ್ಲೇ ಅಂತರ್ಗತವಾಗಿರುವಂತೆ ಈ ಫಲಕದ ಸೊಲ್ಲುಗಳಲ್ಲೇ ಸೇವಾಸಾಮ್ರಾಜ್ಯದ ಸಾರವೆಲ್ಲ ಅಡಕವಾಗಿದೆ ಎಂಬುದು ನಿಮಗೆ ತಿಳಿದಿರಲಿ.

ಎಂಬ ಮೊರೆಯಿಂದ ಆರತಿ ಎತ್ತಿದರೆ ಮಾತ್ರ ಶೇ. 10 ಕೃಪೆ. (vii) ವಾದ್ಯ ಬಾರಿಸುವವರಿಗೆ– 'ಹಲವರನ್ನು ಕರೆಯಲೂ, ಅವರ ಗಮನ ಸೆಳೆಯಲೂ, ಅವರೆಲ್ಲರಲ್ಲೂ 'ಸೊನ್ನೆ' ಭಾವ ಜಾಗೃತಿಗೊಳಿಸಲೂ ಜಾಗಟೆ, ಶಂಖ, ನಗಾರಿ, ಮುಂತಾದ ವಾದ್ಯಗಳ ನಾದ ಹೊಮ್ಮುವಂತೆ ಮಾಡುತ್ತಿದ್ದೇವೆ. ಕೃಪೆದೋರಿ' ಎಂಬ ಮೊರೆ ಹೊಮ್ಮಿದರೆ ಶೇ. 10 ಕೃಪೆ. (viii) ಅಲ್ಲಿ ನೆರೆದ ಭಕ್ತರೆಲ್ಲರಿಗೆ– 'ನೀನೇ ಎಲ್ಲ, ನಾವೇನೂ ಅಲ್ಲ ಹೇ ದೇವಾ' ಎಂಬ ತೀವ್ರ ಮೊರೆಯಿದ್ದರೆ ಶೇ. 30 ಕೃಪೆ.

3) ಹೂ ಸೇವೆಯಲ್ಲಿ –

(i) ಹೂ ಖರೀದಿಸಿ ಸಲ್ಲಿಸುವವನಿಗೆ– 'ಹೇ ಅರ್ಪಿಸುವ ಅರ್ಚಕ– 'ಹೇ ದೇವಾ, ಈ ಹೂ ನಿನಗಾಗುತ್ತದೆಯೋ ಇಲ್ಲವೋ ನಾ ತಿಳಿಯೆ. ಅದೇನಿದ್ದರೂ ಮನ್ನಿಸಿ, ಮುನ್ನಡೆಸಿ, ದಾರಿ ತೋರಿ' ಎಂಬ ಕಂಬನಿಯುಕ್ತ ಮೊರೆಯೊಂದಿಗೆ ಹೂ ಏರಿಸಿದರೆ ಮಾತ್ರ ಆತನಿಗೆ ಶೇ. 5 ಕೃಪೆ.

4) ಹೋಮ ಸೇವೆಯಲ್ಲಿ–

(i) ಯಾರು ಹಣ ಖರ್ಚು ಮಾಡುವರೋ, ಅವರು ವಿನೀತಭಾವದಿಂದ ಆ ಸಮಯದಲ್ಲಿ 'ನಾನು' ಭಾವ ನಷ್ಟವಾಗಲೆಂಬ ಮೊರೆಯೊಂದಿಗೆ ಭಗವದ್ ಕೃಪೆಗಾಗಿ ಅನ್ಯ ಚಿಂತೆ ಬಿಟ್ಟು ಬೇಡಿ ಬಾಡುತ್ತಿದ್ದರೆ ಮಾತ್ರ ಶೇ. 50 ಕೃಪೆ. (ii) ಅಲ್ಲಿ ಸೇರಿದ ಇತರರೂ ಆ ಹೊತ್ತಿನಲ್ಲಿ ಭಕ್ತಿಭಾವದಿಂದ ದೇವರ ನಾಮ ಸ್ಮರಣೆಯಲ್ಲೇ ಮುಳುಗಿದ್ದರೆ ಗೈಯಬೇಕು. ಹಸಿದಾಗ ಮೀನನ್ನು ಕೊಟ್ಟರೆ ಒಂದು ದಿನದ ಹಸಿವು ನೀಗೀತು, ಆದರೆ, ಮೀನನ್ನು ಹಿಡಿಯುವುದನ್ನೇ ಕಲಿಸಿ ಕೊಟ್ಟರೆ ಶಾಶ್ವತವಾಗಿ ಹಸಿವು ನೀಗುವಂತಾಗುತ್ತದೆ ಎಂಬ ಮಾತಿನಂತೆ, ಬೇಗ ನಿಮ್ಮನ್ನು ಹರರಾಗಿಸಿ ದಿವ್ಯ ಕೃಪಾಮೃತದ ಸವಿ ನಿಮಗುಣಿಸಬೇಕೆಂದೇ, ನಿಮಗೆ ತಾತ್ಕಾಲಿಕ ಕಿಂಚಿತ್ ಕೃಪೆ ಕರುಣಿಸುವ ಸೇವಾ ವಿಧಾನಗಳನ್ನೆಲ್ಲ ನಾನಿಲ್ಲಿ ಬದಿಗೊತ್ತಿ, ಶಾಶ್ವತವಾದ ಅದ್ಭುತ ಕೃಪೆ ಕರುಣಿಸುವ ಸೇವಾ ವಿಧಾನವನ್ನೇ ರೂಢಿಸಿರುವೆ. ಇನ್ನಾದರೂ ನೀವು ದೇವರು ಬಯಸುವ ಈ ಸೇವೆ ಸಲ್ಲಿಸಲು ಕಂಕಣಬದ್ಧರಾದರೆ ಮಾತ್ರ ಆ ದೇವರ ಭವ್ಯಕೃಪೆಯ ದಿವ್ಯ ಭೋಗ ನಿಮಗೂ ಲಭಿಸುವುದು ಖಂಡಿತ.

*

## ಡಾಕ್ಟರ್‌ಜೀಯವರ ಸಾಧನಾಯಣ

# ಗುರುವಿನೊಡನೆ ದೇವರಡಿಗೆ

ಆನೆಗುಡ್ಡೆ ವಿನಾಯಕ ದೇವರಿಗೆ ಕೊಟ್ಟೆ ಕಡುಬು ಸಮರ್ಪಣೆ ದೊಡ್ಡ ಸೇವೆ. ಮಧೂರು ಗಣಪತಿಗೆ ವಡೆ ಸಮರ್ಪಣೆ ದೊಡ್ಡ ಸೇವೆ ಎಂದೆಲ್ಲ ಕೇಳಿದ್ದ ನಾನೇ ಒಮ್ಮೆ ಗುರೂಜೀಯೊಡನೆ 'ಹಾಗೆಲ್ಲ ನಿರ್ಧರಿಸಿದ್ದು ಯಾರು?' ಎಂದೇ ಕೇಳಿದ್ದೆ. 'ಆ ದೇವರೇ ತನ್ನ ಅರ್ಚಕರಿಗೆ, ನಿಷ್ಠಭಕ್ತರಿಗೆ ಹೇಳಿದ್ದು' ಎಂದೇ ಉತ್ತರಿಸಿದ್ದರು ಗುರೂಜೀ. ದಿನವೂ ಇಡ್ಲಿ ತಿಂದು ಬೋರ್ ಆದ ವ್ಯಕ್ತಿ ಬದಲಾವಣೆಗಾಗಿ ವಡೆ ತಿನ್ನಲು ಮನಸ್ಸು ಮಾಡುವಂತೆ ಆ ದೇವರೂ ರುಚಿ ವೈವಿಧ್ಯಕ್ಕಾಗಿ ಬೇರೆ ಬೇರೆ ತಿಂಡಿಯನ್ನು ಸೂಚಿಸಿರಬಹುದೇ ಎಂದೇ ಆಗ ನನ್ನ ಲೌಕಿಕ ಮನಸ್ಸಿಗೆ ಅನಿಸಿತ್ತು. ನನ್ನ ಆ ಯೋಚನೆಯನ್ನರಿತೇ ಶ್ರೀ ಗುರೂಜೀ ಹೇಳಿದ್ದರು–'ದೇವರು ತಿಂಡಿಯ ಚಪಲದಿಂದ ಆ ರೀತಿ ಸೂಚಿಸಿದ್ದಲ್ಲ. ಅದು ಆ ದೇವರು ಮೆಚ್ಚುವ ಸೇವೆ ಎಂಥದು ಎಂಬುದನ್ನು ಸೂಚಿಸುತ್ತದೆ. ಆನೆಗುಡ್ಡೆ ಪ್ರದೇಶದ ಆಸುಪಾಸಿನಲ್ಲಿ ಭತ್ತ, ಉದ್ದು ಇತ್ಯಾದಿಗಳನ್ನು ಹೆಚ್ಚು ಬೆಳೆಯುವುದರಿಂದ ಅಲ್ಲಿನ ಜನರಿಗೆ ಅನುಕೂಲವಾಗಲೆಂದು ಅಲ್ಲಿನ ಗಣೇಶ ದೇವರು ಕಡುಬನ್ನೇ ಸೂಚಿಸಿದ್ದರೆ, ಮಧೂರು ಪ್ರದೇಶದಲ್ಲಿ ತೆಂಗನ್ನು ಹೆಚ್ಚು ಬೆಳೆಸುವುದರಿಂದ ಅಲ್ಲಿನ ಜನರ ಅನುಕೂಲಕ್ಕಾಗಿ ಎಣ್ಣೆಯಲ್ಲಿ ಕರಿಯುವ ವಡೆಯನ್ನೇ ಸೂಚಿಸಿದ್ದರು. ಕಡುಬನ್ನು ಮಾಡಲು ಅಕ್ಕಿಯನ್ನು, ಉದ್ದಿನ ಬೇಳೆಯನ್ನು ಅರೆಯಬೇಕು. ಆ ಹಿಟ್ಟನ್ನು ಹಾಕುವ ಕೊಟ್ಟೆ ಮಾಡಲೂ ಓಲಿಯನ್ನು ತಂದು ಅದರ ಮುಳ್ಳನ್ನು ತೆಗೆದು ಕಾಯಿಸಬೇಕು. ಆ ಕೊಟ್ಟೆಗೆ ಹಿಟ್ಟನ್ನು ಹಾಕಿ ಪುನಃ ಬೇಯಿಸಬೇಕು. ಆಗಲೇ ಗಣಪತಿಗೆ ಪ್ರಿಯವಾದ ಮೃದು ಕಡುಬಾಗುತ್ತದೆ. ಹೀಗೆ ಕಡುಬಿಗಾಗಿ ಅರೆಯುವ, ಮುಳ್ಳು ತೆಗೆಯುವ, ಕಾಯಿಸುವ, ಬೇಯಿಸುವ ಈ ಕೆಲಸಗಳೆಲ್ಲವೂ 'ನಾನು' ಭಾವವನ್ನು ಇದೇ ರೀತಿ ಬಗೆ ಬಗೆಯಾಗಿ ಸಂಸ್ಕರಿಸಿಕೊಂಡಾಗಲೇ ಅಂತರ್ಯ ಮೃದುವಾಗಿ ಆ ದೇವರಿಗೆ ಪ್ರಿಯವಾಗುವಂತಾಗುತ್ತದೆ ಎಂಬುದನ್ನೇ ಸೂಚಿಸುತ್ತದೆ. ಇನ್ನು ವಡೆ ಮಾಡುವಾಗಲೂ ಹಿಟ್ಟು ಮಾಡುವ, ಅರೆಯುವ, ಎಣ್ಣೆಯಲ್ಲಿ ಕರಿಯುವ ಕಾರ್ಯಗಳೆಲ್ಲವೂ 'ನಾನು' ಭಾವವನ್ನು ಅದೇ ರೀತಿ ಸಂಸ್ಕರಿಸಿಕೊಳ್ಳಬೇಕೆಂಬುದನ್ನೇ ಸೂಚಿಸುತ್ತವೆ. ಅಂತೂ ಆ ತಿಂಡಿಗಳು 'ನಾನು' ಭಾವಹದವಾದುದರ, ನಾಶವಾದುದರ ದ್ಯೋತಕ ಅಷ್ಟೇ. ದೇವರಿಗೆ ಸೇವೆಯಾಗಿ ಅವುಗಳನ್ನು ಅರ್ಪಿಸುವಾಗ ಆ ತಿಂಡಿಗಳು ದೇವರಿಗೆ ಪ್ರಿಯ ಅಲ್ಲ–ಅವು ಬಿಂಬಿಸುವ 'ನಾನು' ಭಾವನಾಶ ದೇವರಿಗೆ ಪ್ರಿಯ. ಅಂತೂ ದೇವರಿಗೆ ಅರ್ಪಿಸುವ ಸೇವೆಯ ಯಾವತ್ತೂ ಉದ್ದೇಶ 'ನಾನು' ಭಾವನಾಶ" ಎಂದೇ ಹೇಳಿದ್ದರು.

ನೈವೇದ್ಯ ಎನ್ನುವುದು ಈ 'ನಾನು' ಭಾವದ ನಾಶದ ಪ್ರತೀಕ. ಸಾಮಾನ್ಯವಾಗಿ ನೈವೇದ್ಯವಾಗಿ ಹಣ್ಣುಕಾಯಿಯನ್ನು ಅರ್ಪಿಸುತ್ತೇವೆ. ಗಟ್ಟಿಯಾದ ಆ ಕಾಯಿ ಅಹಂಕಾರ ಮಮಕಾರದ ಪ್ರತೀಕ. ಆದರೆ ಬಾಳೆಹಣ್ಣುಗಳು ಉಳಿದ ಬಂಧಿಸುವ 9 ಮಂದಿಗಳ ಪ್ರತಿನಿಧಿ. ನೈವೇದ್ಯ ಅರ್ಪಿಸುವಾಗ ಕಾಯಿ ಒಡೆದು ಬಾಳೆಹಣ್ಣಿನ ತಲೆ ಮುರಿಯಲಾಗುತ್ತದೆ. ಅದೆಷ್ಟೇ ಗಟ್ಟಿ ಇದ್ದರೂ ಅಹಂಕಾರ ಮಮಕಾರಗಳನ್ನು ಮರ್ದಿಸಿ ಬಂಧಿಸುವ 9 ಮಂದಿಯನ್ನು ಚಿವುಟಿ ಹಾಕುವೆ ಎಂಬುದರ ಪ್ರತೀಕ ಈ ಕ್ರಿಯೆ ಅಷ್ಟೇ. ಹಣ್ಣುಕಾಯಿ ನೈವೇದ್ಯ ಅರ್ಪಿಸದೆ ಮನದಲ್ಲೇ 'ಬಂಧಿಸುವ 9 ಮಂದಿ ಪ್ರೇರಿತ 'ನಾನು' ಭಾವವನ್ನು ಅರ್ಪಿಸುವೆ' ಎಂದೇ ಪ್ರಾರ್ಥಿಸಬಹುದು–ಎಣಿಸಿಕೊಳ್ಳಬಹುದು. ಆ ಇಂಗಿತ ದೃಢವಾಗಿ ಮನದಾಳಕ್ಕಿಳಿಯಲು ಅನುಕೂಲವಾಗಲೆಂದೇ ಆ ಪ್ರಾರ್ಥನೆಯ ಪ್ರಾತ್ಯಕ್ಷಿಕೆಯಾಗಿ ನೈವೇದ್ಯವನ್ನು ಅರ್ಪಿಸಲಾಗುತ್ತದಷ್ಟೇ. 'ಅಮ್ಮನ ಮೇಲೆ ತುಂಬ ಪ್ರೀತಿ ಇದೆ' ಎಂದು ಹೇಳುತ್ತಲೇ ಇರುವ ಬದಲು ಅಮ್ಮನಿಗಾಗಿ ಬಟ್ಟೆಬರೆಯೇ ಮೊದಲಾದ ಆಕೆಯ ಬೇಡಿಕೆಗಳನ್ನು ಪೂರೈಸಿದಾಗಷ್ಟೇ ಅಮ್ಮನ ಮೇಲೆ ಪ್ರೀತಿ ಇರುವುದು ಖಾತ್ರಿ ಆಗುವುದಲ್ಲವೇ? ಅದೇ ರೀತಿ ಈ 'ಸೇವೆ'ಗಳನ್ನು ಅರ್ಪಿಸಿದಾಗಷ್ಟೇ 'ನಾನು' ಭಾವಹರಣ ಆಗಬೇಕೆಂಬ ತುಡಿತ ಖಾತ್ರಿ ಆಗುತ್ತದಷ್ಟೇ.

ಆ ದೇವರೇ 'ನಾನು' ಭಾವ ಧ್ವಂಸದ ಪ್ರತೀಕವಾಗಿ ಬೇರೆ ಬೇರೆ ತಿಂಡಿಗಳನ್ನು ನೈವೇದ್ಯವಾಗಿ ಅರ್ಪಿಸಲು ಹೇಳುವುದರ ದಿವ್ಯಾನುಭವ ಈ ಬಾರಿ ನವರಾತ್ರಿಯಲ್ಲಿ ನನಗೂ ಆಯಿತು. ಬಂಧಿಸುವ 9 ಮಂದಿಯಲ್ಲಿ ಪ್ರತಿಯೊಬ್ಬರನ್ನೂ ನವರಾತ್ರಿಯ ಒಂದೊಂದು ದಿನ ಒಂದೊಂದು ರಸದ ಮೂಲಕ, ಕಾಮವನ್ನು ಭಕ್ತಿರಸದ ಮೂಲಕ, ಲೋಭವನ್ನು ಕರಣರಸದ ಮೂಲಕ, ಮೋಹವನ್ನು ವೀರರಸದ ಮೂಲಕ, ಮದವನ್ನು ರೌದ್ರರಸದ ಮೂಲಕ, ಮತ್ಸರವನ್ನು ಭಯಾನಕ ರಸದ ಮೂಲಕ, ಅಹಂಕಾರವನ್ನು ಹಾಸ್ಯರಸದ ಮೂಲಕ, ಮಮಕಾರವನ್ನು ಅದ್ಭುತರಸದ ಮೂಲಕ, ಸಂಶಯವನ್ನು ಶೃಂಗಾರರಸದ ಮೂಲಕ ಎದುರಿಸಿ ನಿಯಂತ್ರಿಸುವುದನ್ನು ಶ್ರೀ ಗುರೂಜೀ ದಿವ್ಯ ಸಂದೇಶ ಕರುಣಿಸಿ ತಿಳಿಹೇಳುತ್ತಿದ್ದುದುಂಟು. ದಿನದಿನವೂ ವಿಶೇಷ ನೈವೇದ್ಯ ತಯಾರಿಸಿ ಅರ್ಪಿಸುತ್ತಿದ್ದುದುಂಟು. ವಿಜಯ ದಶಮಿಯ ದಿನ ಬೆಳಗಿನ ಜಾವ ಬಂಧಿಸುವ 9 ಮಂದಿಯನ್ನು ನಾಶಪಡಿಸಿಕೊಳ್ಳುವುದರ ಪ್ರತೀಕವಾಗಿ ಹೋಮ ನಡೆಸುತ್ತಿದ್ದುದುಂಟು. ಸಿಮೆಂಟಿನ ಮೇಲ್ಛಾವಣಿ ಗಟ್ಟಿಯಾದ ಮೇಲೆ ಊತುಗಳನ್ನೆಲ್ಲಾ ತೆಗೆದು ಬಿಡುವಂತೆ ಈಗ ಬಂಧಿಸುವ 9 ಮಂದಿಯ ಪೀಡೆ ತೊಲಗಿದೆ ಎಂದೇ ನವರಾತ್ರಿಯಲ್ಲಿ ಆ ಕ್ರಮಗಳಿಲ್ಲ ಇರದೆ ನಿತ್ಯವೂ ಜಗನ್ಮಾತೆಗೆ ವಿಶೇಷ ಪೂಜೆ ಮಾತ್ರ ಸಲ್ಲುತ್ತಿದೆ. ಅಭ್ಯರ್ಥಿಯ ಮೇಲಿನ ವಿಶ್ವಾಸದಿಂದ ಇಂಟರ್‌ವ್ಯೂನಲ್ಲಿ 'ಈ ಪ್ರಶ್ನೆ ಕೇಳುತ್ತಾರೆ–ಆಗ ಹೀಗೆ ಉತ್ತರ ಹೇಳಿದರೆ ಆಯ್ಕೆ ಕಮಿಟಿಯವರಿಗೆ ಖುಶಿಯಾಗುತ್ತದೆ' ಎಂದು ಮುಂದಾಗಿ ಹೇಳುವ ಆಯ್ಕೆ ಕಮಿಟಿಯ ಸದಸ್ಯನಂತೆ, ಶ್ರೀ ಗುರೂಜೀಯೂ ನವರಾತ್ರಿಯ ಪ್ರತಿದಿನವೂ ಈ ಬಾರಿ ಜಗನ್ಮಾತೆಯ ಅಭಿಷೇಕ ಆಗುತ್ತಲೇ ಆ ಜಗನ್ಮಾತೆಗೆ ಅಂದಿನ ಪ್ರಾರ್ಥನೆ ಮುಟ್ಟಿಸುವ ಅಂದಿನ ವಿಶೇಷ ನೈವೇದ್ಯದ ಬಗ್ಗೆ ಸೂಚನೆ ನೀಡುತ್ತಿದ್ದರು. ಆ ನೈವೇದ್ಯ ಬಂಧಿಸುವ 9 ಮಂದಿಯ ಹರಣವನ್ನು ಹೇಗೆ ಪ್ರತಿನಿಧಿಸುತ್ತದೆಂದೂ ತಿಳಿಸುತ್ತಿದ್ದರು. ಮೊದಲ ನವರಾತ್ರಿಯ ದಿನ ಅವರು ಮುಂಡಕ್ಕಿ (ಪುರಿ) ಸಿಹಿ ಪಂಚಕಜ್ಜಾಯ ಅರ್ಪಿಸಲು ಹೇಳಿದರು. ಕಾಮವನ್ನು ನಿಯಂತ್ರಿಸುವಾಗ ಆ ಜಗನ್ಮಾತೆಯ ಹೆಸರಿನಲ್ಲಿ ಮುಂಡಕ್ಕಿಯಂತೆ ಶುದ್ಧರಾಗಿ ಹಗುರಾಗಿ ನಾಮನೇಮ ಪ್ರೇಮದ ಸಿಹಿ ನಮ್ಮದಾಗಬೇಕು ಎಂದೇ ಅದರರ್ಥ ಎಂದರು. ಕ್ರೋಧವನ್ನು ನಿಯಂತ್ರಿಸಲು ಮನಸ್ಸು ಬೆಣ್ಣೆಯಂತೆ ಮೃದುವಾಗಬೇಕು, ದೈವಭಕ್ತಿಯ ಬೆಲ್ಲದೊಂದಿಗೆ ಮಿಶ್ರವಾಗಬೇಕು ಎಂದೇ ಎರಡನೇ ದಿನ ಬೆಣ್ಣೆ ಬೆಲ್ಲ ಕಲಸಿ ಇಡುವಂತೆ ಸೂಚಿಸಿದರು. ಲೋಭದ ನಿಯಂತ್ರಣಕ್ಕೆ ನಿಸ್ವಾರ್ಥತೆಯನ್ನು ಭಗವನ್ನಾಮಸ್ಮರಣೆಯ ಸಿಹಿಯೊಂದಿಗೆ ಮೈಗೂಡಿಸಿಕೊಳ್ಳಬೇಕೆಂದೇ ತುರಿದ ತೆಂಗಿನಕಾಯಿ ಸಕ್ಕರೆ ಮಿಶ್ರಣವನ್ನು ಅರ್ಪಿಸಲು ಹೇಳಿದರು. ಮೋಹದ ನಿಯಂತ್ರಣಕ್ಕೆ ಹೆಸರು ಬೇಳೆಯನ್ನು ನೀರಲ್ಲಿ ನೆನೆಸಿದಂತೆ ದೃಢಭಕ್ತಿಯಲ್ಲಿ ಮನವನ್ನು ನೆನೆಸಿಕೊಂಡು ಸಾಧನಶೀಲರಾಗಬೇಕೆಂದೇ ಹೆಸರುಬೇಳೆ ಕೋಸಂಬರಿ ಮಾಡಿಡಲು ಹೇಳಿದರು. ಮದದ ನಿಯಂತ್ರಣಕ್ಕೆ ಮನದ ಉದ್ವೇಗ ಉನ್ಮಾದಗಳೆಲ್ಲ ದೇವರ ನಾಮಸ್ಮರಣೆಯ ಓಘದಲ್ಲಿ ತೆಳ್ಳಗಾಗಬೇಕೆಂದೇ ಅವಲಕ್ಕಿ ಮೊಸರನ್ನು ಐದನೇ ದಿನ ಅರ್ಪಿಸಲು ಹೇಳಿದರು. ಮತ್ಸರವನ್ನು ಮೆಟ್ಟುವಲ್ಲಿ ಅವಲಕ್ಕಿಯಂತೆ ಮನಸ್ಸು ಜಜ್ಜಲ್ಪಡಬೇಕು. ಭಕ್ತಿ, ಶ್ರದ್ಧೆ, ವ್ಯಾಕುಲತೆಗಳ ಸಿಹಿಪಾಕದಿಂದ ಪರಿಪುಷ್ಟವಾಗಬೇಕು ಎಂದೇ ಅವಲಕ್ಕಿ ಸಿಹಿ ಪಂಚಕಜ್ಜಾಯ ತಯಾರಿಸಿಡಲು ಹೇಳಿದರು. ಅಹಂಕಾರದ ಮರ್ದನಕ್ಕೆ ಅರಳು ಹುಡಿಯಂತೆ ಮನದಲ್ಲಿ ಸದ್ಭಾವನೆಗಳ ಸಂಚಯ ಉಂಟಾಗಿ, ಸಾಧನಾಸಕ್ತಿಯ ಸಿಹಿ ಅದರ ಜತೆ ಸೇರಬೇಕೆಂದು ಅರಳು ಹುಡಿ ಪಂಚಕಜ್ಜಾಯ ಸಮರ್ಪಿಸಲು ಸೂಚಿಸಿದರು. ಮಮಕಾರದ ನಾಶಕ್ಕೆ ಅರಳಿನಂತೆ ಹಗುರಾಗಬೇಕು, ದೈವೀಭಾವದ ಸಿಹಿಯೊಂದಿಗೆ ಒಂದಾಗಬೇಕು ಎಂದೇ ಎಂಟನೇ ದಿನ ಅರಳು ಪಂಚಕಜ್ಜಾಯವನ್ನು ಸಲ್ಲಿಸಲು ಆದೇಶಿಸಿದರು. ಒಂಬತ್ತನೇ ದಿನ ಸಂಶಯ ನಾಶವಾಗಲೆಂದು ಬೇಡಲು ಕಾಯಿಯಾಗಿರುವ, ಹಣ್ಣಾಗಿರುವ ಸಂಶಯದ ಪ್ರತೀಕವಾಗಿ ಹಣ್ಣುಕಾಯಿಯೇ ಸಾಕೆಂದರು. ಅಂತೂ ಪ್ರತಿದಿನವೂ ಗುರೂಜೀ ಎಂದಂತೆ ನಡೆದು ನೈವೇದ್ಯ ಅರ್ಪಿಸಿದಾಗ ಆ ಜಗನ್ಮಾತೆ ತನಗೆ ಬೇಕಾದ್ದನ್ನೇ ಅರ್ಪಿಸುತ್ತಿರುವುದಕ್ಕೆ ಸಂತಸಪಟ್ಟು ನಗುನಗುತ್ತ ಹರಸುತ್ತಿದ್ದಳು. ಆಕೆಯ ಆ ಪ್ರೀತಿಯ ಸವಿಯನ್ನು ಒಂಬತ್ತು ದಿನವೂ ಉಂಡ ನನಗೆ ಕೊನೆಯ ನವರಾತ್ರಿಯ ದಿನ ಧನ್ಯತೆಯಿಂದ ರಥದ ಆರತಿ ಎತ್ತುವಾಗ 'ಅಮ್ಮ, ನಿನ್ನ ಇಂಥ ಕೃಪೆಗಾಗಿ ನಾನಿನ್ನೊಂದು ವರ್ಷ ಕಾಯಬೇಕಲ್ಲ!' ಎಂದು ಕಂಬನಿಯ ಕೋಡಿಯೇ ಹರಿದಿತ್ತು. ಆಗ ಆ ತಾಯಿಯೇ ಕಂಬನಿ ಒರೆಸಿ 'ನೀನು ಕೃಪೆಗಾಗಿ ಕಾಯಬೇಕಿಲ್ಲ. ಒಂದು ವರುಷ ಎಂದು ಕಂಬನಿಗರೆದರೆ ಉಳಿದೆಡೆಯ ಅರ್ಚಕರು ಹಣಮಾಡಲು ಇನ್ನೊಂದು ವರ್ಷ ಕಾಯಬೇಕಲ್ಲ ಎಂದು ವ್ಯಥಿಸುತ್ತಿದ್ದಾರೆ ಮಗು! ಯಾರಲ್ಲಿ 'ನಾನು' ಭಾವ [illegible]...ಯಾರಿಗೆ ದೇವರು ಬೇಕೋ ದೇವರ ಕೃಪೆ ಮಾತ್ರಬೇಕೋ ಅವರು ದೇವರಿಗೂ ಬೇಕು. ಈ ಡಿವೈನ್ ಪಾರ್ಕಿನಲ್ಲಿ ನನ್ನ ಕೃಪೆ ಅನುದಿನವೂ ಇದೆ ಮಗೂ!' ಎಂದಿದ್ದಳು.



'ನಾನು' ಭಾವ ನೀಗುವಿಕೆಯೇ ಅಧ್ಯಾತ್ಮದ ಸಾರ ಎಂಬುದನ್ನು ಪ್ರತಿಬಿಂಬಿಸಲೆಂದೇ ಈ ಹಿಂದೆಯೇ ಶ್ರೀ ಗುರೂಜೀ ಒಂದು ಅಧ್ಯಾತ್ಮ ಸಮೀಕರಣವಿತ್ತಿದ್ದರು 'ನೀನು–'ನಾನು' = ಭಾನು' ಎಂಬುದೇ ಅದು. ನಿನ್ನಿಂದ 'ನಾನು' ಭಾವ ನಷ್ಟವಾದಾಗಲೇ ನೀನು ಆ ಭಾನು ಅಥವಾ ದೇವರಾಗುವಿ ಎಂದೇ ಅರ್ಥ. ಅಧ್ಯಾತ್ಮ ಸಾಧನಾ ವಿಧಿಗಳೆಲ್ಲವುಗಳ ಉದ್ದೇಶವೂ ಈ 'ನಾನು' ಭಾವವನ್ನು ನೀಗಿಸುವುದೇ ಆಗಿದೆ. ಚೀಲ ಖಾಲಿ ಆದಷ್ಟೂ ಅದರಲ್ಲಿ ಹೆಚ್ಚು ತುಂಬಿಸಬಹುದಾದಂತೆ, ಈ 'ನಾನು' ಭಾವನಷ್ಟವಾದಷ್ಟೂ ಅಲ್ಲಿ ಆ ದೇವರೇ ಹೆಚ್ಚು ವ್ಯಕ್ತವಾಗುವುದು ಖಂಡಿತ. ಕನಕದಾಸರೆಂದಂತೆ 'ನಾನು' ಹೋದರೆ ಮಾತ್ರ ಸ್ವರ್ಗಕ್ಕೆ ಹೋಗಬಹುದು. ಆ ದೇವರ ದಿವ್ಯತೆಯನ್ನು ಅನುಭವಿಸಬಹುದು. ಊದಿನ ಬತ್ತಿ ಕಾರ್ಖಾನೆಗೆ ಹೋಗಿ ಬರುವಾಗ ಮೈಯೆಲ್ಲ ಘಮಘಮಿಸುವಂತೆ ಈ ಡಿವೈನ್ ಪಾರ್ಕ್‌ಗೆ ಬಂದು ಹೋಗುವ ನಿಮ್ಮಲ್ಲೂ 'ನಾನು' ಭಾವ ಹಿಂಗಿ ದೈವೀಗುಣಗಳ ಸೌರಭ ಸೂಸುವಂತಾದೀತೇ?

# ಹಿಂದಿನ ಬಾರಿಯ ಪ್ರಶ್ನೆಗಳಿಗೆ ಶ್ರೀ ಗುರೂಜೀ ನೀಡಿದ ಉತ್ತರ –

1) ಶುದ್ಧ ಭಕ್ತಿ ಇರುವಾತ ಖಂಡಿತವಾಗಿಯೂ ಈ ರೀತಿ ವರ್ತಿಸಲಿಕ್ಕಿಲ್ಲ. ಏಕೆಂದರೆ ಶುದ್ಧ ಭಕ್ತಿಯು ಸರ್ವದಾ ಭಗವಂತನಲ್ಲಿ ವಿಧೇಯತೆಯನ್ನೇ ತರುತ್ತದೆ. 'ನನ್ನ ದೇವರು ಖಂಡಿತ ಕೃಪೆ ಹರಿಸುತ್ತಾನೆ. ಮೊದಲಿಗೆ ನನ್ನ ಪ್ರಯತ್ನ ಸಮರ್ಪಕವಾಗಿರಲೇ ಬೇಕು' ಎಂದಾತ ಪೂರ್ಣ ಆತ್ಮವಿಶ್ವಾಸದಿಂದ ಮುನ್ನುಗ್ಗಬೇಕಾಗಿತ್ತು. ಶುದ್ಧ ಭಕ್ತಿ ಯಾವಾಗಲೂ ಧೈರ್ಯ, ಸ್ಥೈರ್ಯ, ಆತ್ಮವಿಶ್ವಾಸ, ಛಲ ಬಲ ಹಂಬಲಗಳನ್ನು ದೃಢಪಡಿಸದೇ ಇಲ್ಲ. ಶುದ್ಧ ಭಕ್ತಿಯೇ ವಿವೇಕವನ್ನು ಬೆಳಗಿಸಿ, ಸರ್ವಸಮರ್ಪಣಾಭಾವದಿಂದ 'ಸೊನ್ನೆ' ಆಗುವಂತೆ ಮಾಡಿ 'ಸನ್ನೆ'ಯಾದ ದೇವರ ವಿಶೇಷ ಹಾಗೂ ವಿಶಿಷ್ಟ ಕೃಪೆಯನ್ನು ಅನುಭವಿಸುವಲ್ಲಿ ಪೂರ್ಣ ಸಹಕಾರವನ್ನು ಎಂಥವರಿಗೂ ನೀಡದೇ ಇಲ್ಲ.

2) ವರ್ಷದ ಆರಂಭದಿಂದಲೇ ಕ್ರಮಬದ್ಧವಾಗಿ ಓದುವುದು, ಬರೆದು ಓದುವುದು, ಬರೆದು ಓದಿ ಮನನ ಮಾಡುವುದು – ಈ ವಿಧಾನದಿಂದ ಓದಿದ್ದನ್ನು ಸುಲಭವಾಗಿ ಅರಗಿಸಿಕೊಳ್ಳಬಹುದು. ಸದಾ ಮನಸ್ಸಿಗೆ ಸೂಕ್ತ ಸೂಚನೆಯನ್ನು ಕೊಡುತ್ತಾ – 'ಹೇ ಮನಸ್ಸೇ, ವರ್ಷಪೂರ್ತಿ ಕಲಿಸಿದ ವಿಚಾರಗಳಲ್ಲಷ್ಟೇ ಪರೀಕ್ಷೆಯಲ್ಲಿ ಪ್ರಶ್ನೆಗಳು ಬರುತ್ತವೆ. ಪರೀಕ್ಷಕರಂತೂ ಸದಾ ಮೃದು ಹೃದಯಿಗಳೇ – ಪಾಸು ಮಾಡಲೋಸುಗ ಸದಾ ಕಾಯುತ್ತಿರುವ ಸಜ್ಜನರು. ಖಂಡಿತವಾಗಿಯೂ ನೀನು ಧೈರ್ಯ ತಳೆಯಲೇ ಬೇಕು' ಎಂಬಿತ್ಯಾದಿ ನುಡಿಗಳನ್ನು ಮೆಲ್ಲುತ್ತಲೇ ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳಬೇಕು. ದಿನಾಲೂ ಮೂರು ಬಾರಿಯಾದರೂ ಶ್ರೀರಾಮರಕ್ಷಾ ಸ್ತೋತ್ರ ಪಠಿಸಬೇಕು. ಮನನಶಕ್ತಿ ಹೆಚ್ಚಿಸಿ ಜಾಣ್ಮೆ ಕಂಗೊಳಿಸುವಂತೆ ಮಾಡುವ ಒಳಗಿನ ಆತ್ಮಶಕ್ತಿಯಲ್ಲಿ 'ಹೇ ದೇವಾ, ಓದಿದುದರಲ್ಲೇ ಪ್ರಶ್ನೆಗಳು ಬರುವಂತಾಗಲಿ, ಬಂದ ಪ್ರಶ್ನೆಗಳಿಗೆ ಸಮರ್ಪಕವಾಗಿ ಉತ್ತರಿಸುವ ಶಕ್ತಿ ಮೂಡಲಿ, ನಿನ್ನ ಕೃಪೆಯ ನೆರಳಿನಲ್ಲಿ ನಾನೀಗ ಉತ್ತರಿಸುತ್ತಿದ್ದೇನೆ. ಖಂಡಿತವಾಗಿಯೂ ಸೂಕ್ತ ಮಾರ್ಗದರ್ಶನವಿತ್ತು ಕಾಪಾಡು ಪ್ರಭೂ...' ಎಂದು ದಿನಂಪ್ರತಿ ವಿನಮ್ರ ಪ್ರಾರ್ಥನೆಯನ್ನು ಸಲ್ಲಿಸುವ ಕ್ರಮ ರೂಢಿಸಿಕೊಂಡಲ್ಲಿ ಪರೀಕ್ಷಾ ಭೀತಿ ಹೇಳ ಹೆಸರಿಲ್ಲದಂತೆ ದೂರಾಗುತ್ತದೆ.

3) ಬದುಕಿ ಉಳಿದಿರುವುದೇ ದೇವರ ಇರವಿಗೆ ಜೀವಂತ ಸಾಕ್ಷಿ. ಗಾಢ ನಿದ್ರೆಯಲ್ಲೂ ಹೃದಯಬಡಿತ, ಶ್ವಾಸೋಚ್ಛ್ವಾಸ, ಕಶ್ಮಲ ವಿಸರ್ಜನೆ, ಜೀರ್ಣಕ್ರಿಯೆ, ದುರಸ್ತಿ ಕಾರ್ಯ, ಬೆಳವಣಿಗೆಯೇ ಮೊದಲಾದ ಜೈವಿಕ ಕ್ರಿಯೆಗಳೆಲ್ಲ ಸದ್ದಿಲ್ಲದೆ, ಸುದ್ದಿ ಮಾಡದೆ ಸಮರ್ಪಕವಾಗಿ ನಡೆದೇ ಇರುತ್ತವೆ. ಸ್ವಸೂಚನಾ ಚಿಕಿತ್ಸೆಯಿಂದಂತೂ ಬಹುಬೇಗ ಉನ್ನತಿ ಮಾರ್ಗದಲ್ಲಿ ಮುನ್ನಡೆಯಬಹುದೆಂದು ತಿಳಿಯುವುದೇ ಅತಿ ಸುಲಭದ ನಿಖರ ಸಾಕ್ಷಿ.

4) ಸ್ವಪ್ರಯತ್ನ ಶೇ. 100 ಆದಾಗಲೇ ದೈವಕೃಪೆಯ ವಿಶೇಷ ಅನುಭವವಾಗುತ್ತದೆ. 'ಮೊದಲು ಪ್ರಯತ್ನ, ಮತ್ತೆ ಪ್ರಾರ್ಥನೆ' ಎಂಬೀ ಸತ್ಯವನ್ನು ಮಕ್ಕಳಲ್ಲಿ ಚಿಕ್ಕಂದಿನಿಂದಲೇ ರೂಢಿಸಿ, ಓದಿನಲ್ಲಿ ಅಭಿರುಚಿ ಹುಟ್ಟಿಸಿ ಅವರಿಗೆ ಧೈರ್ಯ ತುಂಬುತ್ತಲೇ ರಕ್ಷಕರು ಪ್ರೋತ್ಸಾಹಿಸಬೇಕು. ಮಕ್ಕಳು ಪರೀಕ್ಷೆಗೆಂದು ತೆರಳಿದಾಗ ಸ್ತುತಿ, ಸ್ತೋತ್ರ, ಪಾರಾಯಣಾದಿಗಳಲ್ಲಿ ರಕ್ಷಕರು ತಲ್ಲೀನರಾದಾಗ ಮಕ್ಕಳ ಪರೀಕ್ಷೆ ಸುಲಭವಾಗುತ್ತದೆ. ಮಕ್ಕಳ ಸರ್ವತೋಮುಖ ಯಶಸ್ಸಿಗಾಗಿಯೂ, ಶಿಸ್ತು – ಸಂಯಮವನ್ನು ಅವರು ರೂಢಿಸಿಕೊಳ್ಳುವಂತೆಯೂ ದಿನಾಲೂ ಸರ್ವಶಕ್ತನಲ್ಲಿ ಬೇಡಿ ಬಾಡುವುದಂತೂ ರಕ್ಷಕರ ಆದ್ಯ ಕರ್ತವ್ಯ.

# ಮಾರ್ದನಿ

## ಮುಂದಿನ ಬಾರಿಗೆ ಪ್ರಶ್ನೆಗಳು –

ತಂದೆ ತನ್ನ ಕೊನೆಗಾಲದಲ್ಲಿ ಬಳಿಯಿರುವ ಹಿರಿಯ ಮಗನನ್ನು ಕರೆದು ತನ್ನ ಆಸ್ತಿಯಲ್ಲಿ ಆ ಮಗನಿಗೂ, ವಿದೇಶದಲ್ಲಿ ದುಡಿಯುವ ಇನ್ನೊಬ್ಬ ಮಗನಿಗೂ ಸಮಪಾಲಿದೆ ಎಂಬುದನ್ನು ತಿಳಿಸಿ, ಈ ನಿಟ್ಟಿನಲ್ಲಿ ಮೋಸ ಮಾಡದಿರು ಎಂದವನನ್ನೆಚ್ಚರಿಸಿ ಕೊನೆಯುಸಿರೆಳೆಯುತ್ತಾನೆ. ಆ ಹಿರಿಯ ಮಗನಲ್ಲಿ ಅತ್ಯಾಸೆ ಗರಿಗೆದರುತ್ತದೆ. 'ಆ ಆಸ್ತಿ ಎಲ್ಲ ನನಗೇನೇ' ಎಂದು ಡಂಗುರ ಹೊಡೆದು ಹಾಯಾಗಿರುತ್ತಾನೆ. ವರುಷಗಳುರುಳಿದವು. ವಿದೇಶದಲ್ಲಿದ್ದ ಕಿರಿಯ ಮಗ ಬಂದು ಆ ಬಗ್ಗೆ ಕೇಳಿದಾಗ 'ನನ್ನ ತಂದೆ ನನಗೇನೇ ಎಲ್ಲ ಆಸ್ತಿ ಎಂದಿದ್ದಾರೆ. ಹಾಗಾಗಿ ಆ ಆಸ್ತಿ ನಿನಗೇನೂ ಇಲ್ಲ' ಎನ್ನುತ್ತಾನೆ.

ಯೋಚಿಸಿ ಉತ್ತರಿಸಿ –

1) **ಹಿರಿಯ ಮಗನು ಆ ರೀತಿ ಮೋಸ ಮಾಡುವುದು ಸರಿಯೇ ? ಕರ್ಮದ ಹೊಡೆತ ಯಾವ ರೀತಿಯಲ್ಲಿ ಆತನ ಮೇಲೆ ಬಿದ್ದೀತು ?**
2) **ಕಿರಿಯ ಮಗನ ವರ್ತನೆ ದೇವರು ಮೆಚ್ಚುವಂತಿರಲು ಹೇಗಿರಬೇಕು ? ಯಾಕೆ ?**
3) **ಲೌಕಿಕ ವ್ಯಾಮೋಹವನ್ನು ನಿಯಂತ್ರಿಸುವ ಬಗೆ ಹೇಗೆ ?**
4) **ಈ ಸೋದರರ ಮಧ್ಯೆ ಅನ್ಯೋನ್ಯತೆ ಬೆಳೆಯಲು ಯಾರು ಹೇಗೆ ಮುಂದಾಗಬಹುದು ?**

ನಿಮ್ಮ ಉತ್ತರಗಳನ್ನು ಸ್ಪಷ್ಟ ವಿಳಾಸದೊಂದಿಗೆ ದಶಂಬರ **10**ರೊಳಗೆ ಇಲ್ಲಿಗೆ ತಲಪುವಂತೆ ಕಳುಹಿಸಿರಿ –

**ವಿವೇಕ ಸಂಪದ – 'ಮಾರ್ದನಿ'**
**ವಿವೇಕ ಪ್ರಕಾಶನ**
**ಸಾಲಿಗ್ರಾಮ – 576 225, ದ.ಕ.**

ಅತೀ ಹೆಚ್ಚು ಸಮರ್ಪಕವಾದ ಉತ್ತರಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ಪ್ರಕಟಿತ ಬರಹಗಳಿಗೆ ಸೂಕ್ತ ಬಹುಮಾನವೂ ಇದೆ. ಈ ಕುರಿತು ಅಂಥವರಿಗೆ ದಶಂಬರ 15ರೊಳಗೆ ತಿಳಿಸಲಾಗುವುದು. ಅಂಥವರು ಮಾತ್ರ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು ತಮ್ಮ ಭಾವಚಿತ್ರವನ್ನು ನಮಗೆ ಕಳುಹಿಸಬೇಕು.



# ಮೆಚ್ಚುಗೆ ಗಳಿಸಿದ ಉತ್ತರಗಳು



ಎಚ್. ಬಿ. ಚೌಧರಿ
ವಿದ್ಯಾನಗರ
ಸ್ನಾನೇ ತಿರುವು
ಗದಗ–582 101

1. ಶುದ್ಧಭಕ್ತಿ ಇರುವಾತನ ವರ್ತನೆಯಲ್ಲಿ ಥಟ್ಟನೇ ಈ ವಿಕಾರ ತಲೆದೋರುವ ಸಂಭವ ತೀರ ಕಡಿಮೆ. ಭಕ್ತಿ ದೃಢವಾದಾಗ ಮನೋವಿಕಾರಕ್ಕೆ ಅವಕಾಶವೇ ಇಲ್ಲ. 'ತೇನ ವಿನಾ ತೃಣಮಪಿ ನ ಚಲತಿ' ಎಂಬಂತೆ ದೇವರ ಪ್ರೇರಣೆಯಿಂದ ಸದಾ ಅವನು ಅಧ್ಯಯನಶೀಲನೂ, ವಿನೀತನೂ, ಪ್ರಾಮಾಣಿಕ ಪ್ರಯತ್ನವಾದಿಯೂ ಆಗಿರುತ್ತಾನೆ. ಪರಮಾತ್ಮನಲ್ಲಿ ಅವನಿಟ್ಟ ದೃಢವಿಶ್ವಾಸದಿಂದಾಗಿ ನಿಶ್ಚಿಂತೆಯಿಂದ ನಿರ್ಭಯತೆಯಿಂದ ಆತ ಪರೀಕ್ಷೆಗೆ ತೆರಳಿ, ಮನನ ಮಾಡಿದ ವಿಚಾರಗಳನ್ನು ನೆನಪಿನಾಳದಿಂದ ಹೊರತಂದು ಉತ್ತರಿಸಿ ಖಂಡಿತವಾಗಿಯೂ ಅವನು ಪರೀಕ್ಷೆಯಲ್ಲಿ ಜಯಶಾಲಿಯಾಗುತ್ತಾನೆ.
2. ಶುದ್ಧಭಕ್ತಿಯ ಪ್ರಭೆಯಿಂದ ಕತ್ತಲೆಯ ಮಿಥ್ಯಾಭೀತಿ ತಾನೇ ಪಲಾಯನಗೈಯುವುದು. ಇಷ್ಟದೇವರ ಮುಂದೆ ಶ್ರದ್ಧೆಯಿಂದ ಮಣಿದು 'ಜ್ಞಾನಕೊಡು, ಧೈರ್ಯತುಂಬು, ಪೂರ್ಣ ಆತ್ಮವಿಶ್ವಾಸದಿಂದ ಉತ್ತರಿಸುವಂತೆ ಕೃಪೆದೋರು...' ಎಂದು ಬೇಡಿ, ಪ್ರಾಂಜಲ ಮನಸ್ಸಿನಿಂದ ಪರೀಕ್ಷೆಯಲ್ಲಿ ಉತ್ತರಿಸಿದರೆ, ಆ ಕಾರುಣ್ಯಮೂರ್ತಿ ಕೈ ಹಿಡಿದು ಯಶಸ್ಸಿನ ಬೆಳಕಿನೆಡೆ ನಡೆಸದಿರನು.
3. ದೇಹದ ಮೇಲೆ ಎಳ್ಳಷ್ಟೂ ಮೋಹವಿಲ್ಲದಾಗ ಅರ್ಥಾತ್ ಗಾಢನಿದ್ರೆಯಲ್ಲೂ ನಾವೆಲ್ಲ ಬದುಕಿ ಉಳಿದಿರುವುದೇ ಆ ದೇವರ ಇರವಿನ ಸ್ವಾನುಭವಕ್ಕೆ ಅತ್ಯಂತ ಸುಲಭ ಸಾಕ್ಷಿ. ಆ ದೇವರಲ್ಲಿ ಭಕ್ತಿಯಿಂದ ಬೇಡಿಬಾಡಿದಾಗ ಅಂತಃಶಕ್ತಿಯ ಹೆಚ್ಚಳವನ್ನು ಎಂಥವರೂ ಕಂಡುಕೊಳ್ಳಬಹುದು. ಆಗಲೇ ಪರಮಾತ್ಮನು ಕೃಪಾಳು ಎಂಬೀ ಸತ್ಯಕ್ಕೆ ನಿಖರ ಪರೀಕ್ಷೆಯೂ ಆಗುತ್ತದೆ.
4. ಓದು ಜ್ಞಾನ ತೃಷೆ ಹಿಂಗಿಸುವುದಕ್ಕೆ ಹಾಗೂ ಆತ್ಮಸಾಕ್ಷಾತ್ಕಾರಕ್ಕಲ್ಲದೆ ಕೇವಲ ಪರೀಕ್ಷಾ ತಯಾರಿಗಾಗಿ ಅಲ್ಲ ಎಂಬುದನ್ನು ಮೊದಲು ಮಕ್ಕಳಿಗೆ ಪ್ರೀತಿಯಿಂದಲೇ ಮನಗಾಣಿಸಬೇಕು. ಸೂರ್ಯನೆಡೆಗೆ ಮುಖ ಮಾಡಿ ಓಡುವವನನ್ನು ನೆರಳು ಬೆನ್ನಟ್ಟುವಂತೆ ಯಶಸ್ಸು ಕೂಡಾ ಪ್ರಯತ್ನಶೀಲನ ಹಿಂದೆಯೇ ಇರುತ್ತದೆ. ಮಕ್ಕಳ ಮನಸ್ಸಿಗೆ ರಕ್ಷಕರು ಆಗಾಗ ಸೂಕ್ತ ಸೂಚನೆಯನ್ನು ಕೊಡುತ್ತಾ ಹದಗೊಳಿಸುತ್ತಾ, ಸನ್ಮಾರ್ಗ ತೋರಿ ಪ್ರೋತ್ಸಾಹಿಸುತ್ತಲೇ ಇದ್ದರೆ ಜೀವನದ ಪರೀಕ್ಷೆಯಲ್ಲೂ ಅವರು ಬೇಗ ಜಯ ಗಳಿಸುತ್ತಾರೆ.



ವಿ. ಎಸ್. ಪ್ರಶಾಂತ
ವಾಸುದೇವ ರಾವ್ ಕಂಪೌಂಡ್
ಓ. ಪಿ. ರಸ್ತೆ
ಶಿವಮೊಗ್ಗ–577 201

1. ಶುದ್ಧಭಕ್ತಿ ಇರುವಾತ ಎಂದೆಂದಿಗೂ ಈ ರೀತಿ ವರ್ತಿಸುವುದೇ ಇಲ್ಲ. ಏಕೆಂದರೆ ಶುದ್ಧಭಕ್ತಿ ಇರುವಾತನಲ್ಲಿ ಅನಾಸಕ್ತಿ, ಆಲಸ್ಯ, ಅನ್ಯ ಆಕರ್ಷಣೆ, ಅಡ್ಡಿ ಆತಂಕಗಳ ಕೈವಾಡ ಎಷ್ಟು ಮಾತ್ರಕ್ಕೂ ಇರುವುದೇ ಇಲ್ಲ. ಶುದ್ಧಭಕ್ತಿ ಸದಾ ಧೈರ್ಯೋತ್ಸಾಹವನ್ನೂ, ಆತ್ಮವಿಶ್ವಾಸವನ್ನೂ ಪುಟಿದೇಳಿಸಲೇಬೇಕು.
2. ಗತಕಾಲದ ಘಟನೆಗಳನ್ನೆಣಿಸಿ ಕೊರಗಿ ಕರಗಿ ಕುಗ್ಗುವುದನ್ನು ಬಿಟ್ಟು, ಕಲಿಕೆಯನ್ನೇ ತಪಸನ್ನಾಗಿಸಿಕೊಂಡು 'ಪರೀಕ್ಷೆಯಲ್ಲಿ ಚೆನ್ನಾಗಿ ನಿರ್ವಹಿಸುವ ಕೃಪೆದೋರು' ಎಂದು ಆ ದೇವರೊಡನೆ ಬೇಡಿಬಾಡುತ್ತಾ ಓದೆಂಬ ತಪಸ್ಸಿನಲ್ಲಿ ಕ್ರಮಬದ್ಧತೆಯಿಂದ ಮುಂದಾಗಬೇಕು. 'ನನ್ನ ದೇವರು ಖಂಡಿತವಾಗಿಯೂ ಕರುಣಿಸಿ ಕಾಪಾಡುತ್ತಾನೆ, ಆ ದೇವರ ನಮ್ರ ದಾಸ ನಾನು' ಎಂಬೀ ಭಾವ ಅಂತರ್ಯದಲ್ಲಿ ಸದಾ ಹಸಿರಾಗುವಂತೆ ಕಂಡುಕೊಂಡಲ್ಲಿ ಪರೀಕ್ಷಾಭೀತಿ ಖಂಡಿತವಾಗಿಯೂ ತಲೆ ಎತ್ತದು !
3. ಪ್ರತಿಯೊಂದು ಜೀವಿಯೂ ಬದುಕಿ ಉಳಿದಿರುವುದೇ ಆ ದೇವರ ಇರವಿನ ಸ್ವಾನುಭವಕ್ಕೆ ಅತ್ಯಂತ ಸುಲಭವಾದ ನಿಖರ ಪರೀಕ್ಷೆ. ತಾನು ಬದುಕಿಸಬೇಕು ಎಂಬೀ ಹಂಬಲದಿಂದ ವ್ಯಕ್ತಿಯನ್ನು ಬದುಕಿಸುವ ಆ ಪ್ರಾಣಶಕ್ತಿಯಲ್ಲಿ ದೃಢಭಕ್ತಿಯಿಂದ ವಿನಂತಿ ಮಾಡಿದಲ್ಲಿ ಖಂಡಿತವಾಗಿಯೂ ಆಂತರಿಕ ಉದ್ಧಾರದ ಹೆದ್ದಾರಿಯಲ್ಲಿ ಕರುಣಾಳು ಬೆಳಕಾಗಿ ಮುನ್ನಡೆಸದೇ ಇಲ್ಲ.
4. ಅನನ್ಯ ಪ್ರೀತಿ ವಾತ್ಸಲ್ಯದಿಂದ, ತಾಳ್ಮೆ ಸಹನೆಯಿಂದ, ಮೃದುನುಡಿ ನಲ್ಮೆಯಿಂದ ತಮ್ಮ ಮಕ್ಕಳನ್ನು ಕಣ್ಣಿನ ಮೇಲೆ ಕಣ್ಣಿಟ್ಟು ರಕ್ಷಕರು ನೋಡುತ್ತಿರಬೇಕು. ಓದೆಂಬ ತಪಸ್ಸಿನಲ್ಲಿ ಪೂರ್ಣ ಆಸಕ್ತಿ ತಳೆದು ಕ್ರಮಬದ್ಧವಾಗಿ ಆರಂಭದಿಂದಲೇ ಅಭ್ಯಸಿಸುವಂತೆ ಪ್ರೇರಣೆ ನೀಡಬೇಕು. ಮಕ್ಕಳು ಪರೀಕ್ಷೆಗೆ ತೆರಳಿದಾಗ ಅವರ ಶ್ರೇಯಸ್ಸಿಗಾಗಿ ದೇವರ ಸ್ತುತಿ ಸ್ತೋತ್ರ ಪಾರಾಯಣಗೈಯುತ್ತಾ ರಕ್ಷಕರು ವಿನೀತರಾಗಬೇಕು, ಮಕ್ಕಳಲ್ಲಿ ಆತ್ಮವಿಶ್ವಾಸ ಹಾಗೂ ಧೈರ್ಯವನ್ನು ತುಂಬುವುದರಲ್ಲಿ ಯಶಸ್ವಿಯಾಗಬೇಕು.



ಸುನಂದಾ ಕೆಮ್ಮಣ್ಣು
ಹಾಡಿಬೆಟ್ಟು; ಪಡುತೋನ್ಸೆ
ಹೂಡೆ–576 115
ಉಡುಪಿ ತಾಲೂಕು

1. ತೃಣಮಾತ್ರವೂ ಶ್ರಮವಹಿಸದೆ ತನ್ನ ಕಾರ್ಯದ ಯಶಸ್ಸಿನ ಜವಾಬ್ದಾರಿಯನ್ನು ದೇವರ ಹೆಗಲಿಗೇರಿಸುವವ, ಆ ದೇವರ ಶಕ್ತಿಯನ್ನೇ ಪ್ರಶ್ನಿಸುವವನು ಶತಮೂರ್ಖ. ದೇವರಲ್ಲಿ ನಿಜವಾದ ಭಕ್ತಿ, ಇರುವಾತ ಖಂಡಿತವಾಗಿಯೂ ಈ ರೀತಿ ವರ್ತಿಸುವುದೇ ಇಲ್ಲ. ಶುದ್ಧಭಕ್ತಿ ಯಾವಾಗಲೂ ವಿಧೇಯತೆ ಮತ್ತು ವಿನಮ್ರತೆಯನ್ನು ನೂರ್ಮಡಿಗೊಳಿಸುತ್ತದೆ. ದೃಢಭಕ್ತಿಯಿರುವಾತ ಕಾಯಕವೇ ಕೈಲಾಸವೆಂದು ಮರುಮಾತಿಲ್ಲದೆ ಕರ್ತವ್ಯ ಪರಿಪಾಲನೆಗೆ ಮುಂದಾಗುತ್ತಾನೆ.
2. ಆತ್ಮಶಕ್ತಿ ಜಾಗೃತಿಯಿಂದಾಗಿ ವಿವೇಕ ವೃದ್ಧಿಸಿ, ಚುರುಕುಮತಿ ಮತ್ತು ಜಾಣ್ಮೆ ಬೇಗ ಚಿಗುರುತ್ತದೆ ಎಂಬುದು ಖಾತ್ರಿಯಾದಾಗ ಪರೀಕ್ಷಾ ಭೀತಿಯನ್ನು ಖಂಡಿತವಾಗಿಯೂ ಮೆಟ್ಟಿ ನಿಲ್ಲಬಹುದು. ಆರಂಭದಿಂದಲೇ ಕ್ರಮಬದ್ಧ ಅಭ್ಯಾಸವನ್ನು ಮಾಡುವುದರಿಂದಲೂ ಆತ್ಮವಿಶ್ವಾಸ ಹೆಚ್ಚುತ್ತದೆ. ಪರೀಕ್ಷೆಯಲ್ಲಿ ಧೈರ್ಯದಿಂದಲೇ ಎದುರಿಸುವ ಕೆಚ್ಚು ಮೂಡುತ್ತದೆ.
3. ನಮ್ಮನ್ನೇ ನಾವು ಮರೆತು ಗಾಢನಿದ್ರೆಯಲ್ಲಿರುವಾಗಲೂ ದೇಹದ ಜೈವಿಕೆ ಚಟುವಟಿಕೆಗಳು ಸಾಂಗವಾಗಿ ನೆರವೇರುವುದೇ ದೇವರ ಇರವಿಗೆ ನಿಖರವಾದ ಸುಲಭಸಾಕ್ಷಿ. ಸೂಕ್ತ ಸೂಚನೆಯನ್ನು ಮನಸ್ಸಿಗೆ ಸಕಾಲದಲ್ಲಿ ಕೊಟ್ಟು ಆ ದೇವರ ವಿಶೇಷಕೃಪೆಯನ್ನು ಇನ್ನಷ್ಟು ಮತ್ತಷ್ಟು ಖಂಡಿತವಾಗಿಯೂ ಸವಿಯಬಹುದು.
4. ಮಕ್ಕಳ ಪರೀಕ್ಷಾ ಯಶಸ್ಸಿನಲ್ಲಿ ರಕ್ಷಕರ ಪಾತ್ರ ಬಹಳ ಹಿರಿದಾದುದು. ಮಕ್ಕಳ ಅಭ್ಯಾಸಕ್ಕೆ ಪೂರಕವಾದಂತಹ ಪರಿಸರವನ್ನು ಒದಗಿಸಿ, ಮಕ್ಕಳ ದೈನಂದಿನ ಅಭ್ಯಾಸದತ್ತ ಸ್ವಲ್ಪವಾದರೂ ಗಮನ ಹರಿಸಿ ಪ್ರೀತಿ ಪ್ರೇಮದಿಂದಲೇ ಅವರನ್ನು ತಿದ್ದಿ ತೀಡಬೇಕು. ಅವರ ಮೇಲಿನ ಹೊಣೆಯನ್ನು ಆಗಾಗ ಮೃದುಮಾತಿನಲ್ಲೇ ಅವರಿಗೆ ಮನವರಿಕೆ ಮಾಡಿಕೊಟ್ಟು ಅವರಲ್ಲಿ ದೈವಭಕ್ತಿ ದೃಢವಾಗುವಂತೆ ನಾನಾವಿಧದಲ್ಲಿ ನೆರವೀಯಬೇಕು.



ಆರ್. ಎಸ್. ಸಂಕಪಾಳ
ಭೀಮನಗರ
ಗಳತಗಾ–591 219
ಚಿಕ್ಕೋಡಿ ತಾಲೂಕು

1. ಶುದ್ಧ ಭಕ್ತಿಯಿರುವಾತ ಎಂದೆಂದಿಗೂ ಹೀಗೆ ವರ್ತಿಸುವುದಿಲ್ಲ. ಶುದ್ಧ ಭಕ್ತಿಯಿದ್ದಾಗ ಆತ್ಮವಿಶ್ವಾಸ, ಧೈರ್ಯ, ಎದೆಗಾರಿಕೆ, ಕರ್ತವ್ಯಪರತೆ ಹಾಗೂ ಸಾಹಸಪ್ರವೃತ್ತಿ ತಾನಾಗಿಯೇ ಕಂಗೊಳಿಸುತ್ತದೆ. ಆಗ ಎಳ್ಳಷ್ಟೂ ದೈವನಿಂದೆಗೆ ಆಸ್ಪದವೇ ಇರದು. 'ದೇವರಿಗೆ ನನ್ನದೆಲ್ಲವನ್ನೂ ಸಮರ್ಪಿಸುವೆ. ನನಗೆ ದೇ–ವರಿಂದೇನೇನೂ ಬೇಡ. ಆತ ಎಂದೆಂದಿಗೂ ಸರ್ವಶಕ್ತನೇ'–ಇದು ಶುದ್ಧ ಭಕ್ತನ ಸಾರ್ವಕಾಲಿಕ ನಿಲುವಾಗಿರುತ್ತದೆ.
2. ಕ್ರಮಬದ್ಧವಾದ ಅಭ್ಯಾಸಕ್ರಮ ಹಾಗೂ ದೇವರಲ್ಲಿ ಅಚಲಭಕ್ತಿ ಇದ್ದಲ್ಲಿ ಪರೀಕ್ಷಾ ಭೀತಿಯನ್ನು ಸುಲಭದಲ್ಲಿ ಮೆಟ್ಟಬಹುದು. 'ವರ್ಷ ಪೂರ್ತಿ ನಿನ್ನ ಅಪಾರಕೃಪೆಯಿಂದಾಗಿ ಚೆನ್ನಾಗಿಯೇ ಅಭ್ಯಾಸ ಮಾಡಿರುವೆ. ಪರೀಕ್ಷೆ ಸಾಂಗವಾಗಿ ನಿರಾತಂಕವಾಗಿ ಆಗುವಂತೆ ಕೈಹಿಡಿದು ಮುನ್ನಡೆಸು ದೇವಾ'. ಎಂಬೀ ವ್ಯಾಕುಲ ಮೊರೆ ಅಂತರಂಗದಿಂದ ದಿನಂಪ್ರತಿ ಹೊಮ್ಮಿದಲ್ಲಿ ಪರೀಕ್ಷಾ ಭೀತಿ ತಾನಾಗಿಯೇ ದೂರಾಗುತ್ತದೆ.
3. ನಮ್ಮೆಲ್ಲರ ನಿತ್ಯಬದುಕೇ ದೇವರ ಇರವಿಗೆ ಜೀವಂತ ಸಾಕ್ಷಿಯಾಗಿದೆ. ನಾವು ಕಾಣದ ನಮ್ಮ ಹೃದಯ, ಮಿದುಳು, ಶ್ವಾಸಕೋಶ, ಕರುಳು, ಮೂತ್ರಪಿಂಡ... ಒಂದೇ ಎರಡೇ, ಇವೆಲ್ಲವೂ ನಮ್ಮ ಆದೇಶವಿಲ್ಲದೇನೇ ನಮಗಾಗಿ ಹಗಲಿರುಳು ದುಡಿಯುವುದನ್ನು ಕಂಡಾಗ ಆ ದೇವರ ಇರವಿನ ಬಗ್ಗೆ ಸಂದೇಹ ಮೂಡುವುದಾದರೂ ಹೇಗೆ ?
4. ಮಕ್ಕಳಿಗೆ ಅಭ್ಯಸಿಸಲು ಸೂಕ್ತ ವಾತಾವರಣವನ್ನು ಒದಗಿಸುವುದು ರಕ್ಷಕರ ಆದ್ಯ ಕರ್ತವ್ಯ. ಆಗಾಗ ಮಕ್ಕಳಿಗೆ ಧೈರ್ಯ ತುಂಬಿ, ದೇವರಲ್ಲಿ ಅವರ ಭಕ್ತಿ ದೃಢವಾಗುವಂತೆ ಮಾಡಿ ಅಪಾರ ಆತ್ಮವಿಶ್ವಾಸವನ್ನು ಅವರಲ್ಲಿ ಮೂಡಿಸಿ ಸದಾ ಅವರನ್ನು ಪ್ರೀತಿ ಪ್ರೇಮದಿಂದಲೇ ತಿದ್ದಬೇಕು. ಮಕ್ಕಳು ಪರೀಕ್ಷೆಗೆಂದು ತೆರಳಿದಾಗ ರಕ್ಷಕರು ಸೂಕ್ತ ಸಾಧನಾವಿಧಿಗಳಿಂದ ದೇವರಲ್ಲಿ ಮಣಿದು ಮೊರೆಯುತ್ತಿದ್ದರೆ ಖಂಡಿತವಾಗಿಯೂ ಮಕ್ಕಳಲ್ಲಿ ಪರೀಕ್ಷಾ ಯಶಸ್ಸು ಸುಲಭಸಾಧ್ಯವಾಗುತ್ತದೆ.

# ವಂದನ–ನಂದನ

ಪ್ರಿಯ ಓದುಗರೇ, ನಿಮ್ಮ ಸೃಜನಾತ್ಮಕ ಪ್ರತಿಭೆ ಕೇವಲ ಕವಿತೆ ಬರಿಯುವುದಕ್ಕಷ್ಟೇ ಸೀಮಿತವಾಗದಿರಲಿ. ಮಹಾತ್ಮರ ಜೀವನದ ಕತೆಗಳು ಅಥವಾ ನಿಮ್ಮ ಜೀವನದ ಮೇಲೆ ಪ್ರಭಾವ ಬೀರಿದ ವ್ಯಕ್ತಿ ಅಥವಾ ಪುಸ್ತಕ, 'ವಿವೇಕ ಸಂಪದ'ದ ಓದುವಿಕೆಯಿಂದ ನಿಮ್ಮಲ್ಲಾದ ಬದಲಾವಣೆ ನುಡಿಮುತ್ತುಗಳು, ಹೆಚ್ಚೇಕೆ, ಇತ್ಯಾದಿಗಳನ್ನು ತುಂಬ ಚುಟುಕಾಗಿ ಬರೆದು ಕಳುಹಿಸಲು ಪ್ರಯತ್ನಿಸುವಿರಾ ?

## ● ಅನನ್ಯ–ಅಪೂರ್ವ–ಅದ್ಭುತ ●

ಶ್ರೀ ಗುರೂಜೀ–ಸ್ವಾಮಿ ವಿವೇಕಾನಂದರಿಂದ
ಅಂದಿನ ಫೋಟೋಕ್ಕೆ ಇಂದೀಗ ವಿವರಣೆ



6

'ನನ್ನ ಗುರೂಜೀ ಶ್ರೀ ರಾಮಕೃಷ್ಣರ ದೇಹಾಂತ್ಯದ ನಂತರ ಸಮಾನ ಮನಸ್ಕರಾದ ನಾವೆಲ್ಲ ಒಂದುಸೇರಿದೆವು. ಗುರುದೇವ ಶ್ರೀ ರಾಮಕೃಷ್ಣರು ನಮಗೆ ಕಲಿಸಿದ ಪಾಠವನ್ನು ಅನುಷ್ಠಾನಕ್ಕೆ ತರುವ ಬಗ್ಗೆ ಚಿಂತಿಸಿ ಸಮಾಲೋಚಿಸಿ ಕೊನೆಗೊಂದು ನಿರ್ಧಾರಕ್ಕೆ ಬಂದೆವು. ದೇವರ ಸಾಕ್ಷಾತ್ಕಾರ ಮಾಡಿಕೊಂಡು ಆತ್ಮದ ಮೋಕ್ಷಕ್ಕೆ ಪ್ರಯತ್ನಿಸುವುದೂ, ಜಗತ್ತಿನ ಹಿತಕ್ಕಾಗಿ ಪ್ರಯತ್ನಿಸುತ್ತಾ ಜಗಜನರನ್ನು ಆತ್ಮೋದ್ಧಾರದ ಪಥದಲ್ಲಿ ನಡೆಸುವುದೂ ಅಂದು ನಾವು ಕೈಗೊಂಡ ಒಮ್ಮತದ ನಿರ್ಧಾರ ಆಗಿತ್ತು. ಆ ನಿರ್ಧಾರಕ್ಕೆ ಬಂದಿದ್ದ ನಾವೆಲ್ಲ ಹೊಸ ವರುಷದ ಶುಭದಿನದಂದು, ಅಂದರೆ 1887ರ ಜನವರಿ 1ರಂದು, ಹೊಸತನದ ದೀಕ್ಷೆ ತೊಟ್ಟು ಶ್ರೀ ರಾಮಕೃಷ್ಣರಲ್ಲಿ 'ಕೃಪೆದೋರಿ ಕಾಪಾಡಿ, ಕೈಬಿಡಬೇಡಿ' ಎಂದೇ ಮೊರೆಯಿಡುತ್ತ ತೆಗೆಸಿಕೊಂಡ ಭಾವಚಿತ್ರ ಇದು'.

## ಕ್ಷಮೆಯ ಮಹಿಮೆ–ಸಂತರ ವಾಣಿ

'ಕ್ಷಮೆ ಎಂಬ ಅಸ್ತ್ರ ಯಾರ ಕೈಯಲ್ಲಿದೆಯೋ ಆತನನ್ನು ಯಾವ ದುಷ್ಟನೂ ಏನೂ ಮಾಡಲಾರ. ಹುಲ್ಲೇ ಇಲ್ಲದಿದ್ದಲ್ಲಿ ಬೆಂಕಿ ಬಿದ್ದರೆ ಹೇಗೆ ತನ್ನಿಂದ ತಾನೇ ನಂದಿ ಹೋಗುವುದೋ ಹಾಗೆ ಕ್ಷಮೆಯಿರುವ ವ್ಯಕ್ತಿಯಿಂದಾಗಿ ಗಲಾಟೆ, ಗೊಂದಲಗಳೆಲ್ಲ ಉಡುಗಿ ಹೋಗುತ್ತವೆ. ಅಡಗಿಹೋಗುತ್ತವೆ.'

– ಸಂತ ತುಕಾರಾಮ

'ದಯೆಯಿದ್ದಲ್ಲಿ ಧರ್ಮವಿದೆ. ಲೋಭವಿದ್ದಲ್ಲಿ ಪಾಪ ಇದೆ. ಕ್ರೋಧವಿದ್ದಲ್ಲಿ ವಿನಾಶವಿದೆ. ಆದರೆ ಕ್ಷಮೆ ಇದ್ದಲ್ಲಿ ದೇವರೇ ಇರುತ್ತಾನೆ.'

– ಮಹಾತ್ಮ ಕಬೀರ

ಭಗವಂತ ನಮ್ಮ ಸಕಲ ಅಪರಾಧಗಳನ್ನು ಕ್ಷಮಿಸಿ ನಮ್ಮನ್ನು ಸ್ವೀಕರಿಸಲು ನಾವು ಎಲ್ಲರ ತಪ್ಪುಗಳನ್ನೂ ಕಡೆಗಣಿಸಿ ಎಲ್ಲರನ್ನು ಕ್ಷಮಿಸುತ್ತ ಎಲ್ಲರೊಡನೆ ಸೌಜನ್ಯದಿಂದ ವರ್ತಿಸಬೇಕು. ನಗುಮುಖ, ಸಿಹಿಮಾತುಗಳಿಂದ ಮಾತ್ರ ಅದು ನಲಿಯಬಲ್ಲದು.

– ಸಹಸ್ರಬುದ್ಧೆ

## ಯೋಗಿರಾಜಾಯ ನಮೋನಮಃ

ಸಚ್ಚಿದಾನಂದ ರೂಪಾಯ ವಿವೇಕಾನಂದ ಯೋಗಿನೇ
ಸಾಲಿಗ್ರಾಮ ನಿವಾಸಾಯ ನಮಸ್ತೇ ಭವ್ಯಮೂರ್ತಯೇ ।
ವಿದ್ಯಾನಾಂ ಅಗ್ರಗಣ್ಯಾಯ ಚಂದ್ರಶೇಖರ ಮೂರ್ತಯೇ
ಗುರೋರ್ಲೀಲಾ ಮಾಧ್ಯಮಾಯ ನಮಸ್ತೇ ಉಡುಪಯೋಗಿನೇ ॥

– ಸನತ್ ಕುಮಾರ್, ಮತ್ತೂರು

## ನವಹರುಷ–ದಿವ್ಯವರುಷ

ದಶದಿಸೆಗಳನಾವರಿಸಿಹ 'ವಿವೇಕ ಸಂಪದ'
ವಿಶ್ವದೊಳೆಲ್ಲೆಡೆ ಹಬ್ಬುತಿದೆ ನವಹರುಷ।
ದಶಮಾನೋತ್ಸವ ಕಂಡಿಹ ಡಿವೈನ್‌ಪಾರ್ಕ್
ಜಗಜನರೆಲ್ಲರ ಬಾಳಲಿ ಕರೆಯುತಿದೆ ದಿವ್ಯವರುಷ॥

– ಜಿ. ಕೆ. ಕೃಷ್ಣ ಭಟ್, ಕುಳಾ. ಹೊಸಬೆಟ್ಟು

## ದಿಟವಾಯಿತು ಸ್ವಾಮಿ ವಿವೇಕಾನಂದರ ಭವಿಷ್ಯವಾಣಿ !

1893 ಸಪ್ಟಂಬರ ಸ್ವಾಮಿ ವಿವೇಕಾನಂದರು ಅದಾಗಲೇ ಅಮೇರಿಕದ ಚಿಕಾಗೋ ನಗರದ ಸರ್ವಧರ್ಮ ಸಮ್ಮೇಳನದಲ್ಲಿ ಜಯಭೇರಿ ಬಾರಿಸಿದ್ದರು. ಆದೊಂದು ದಿನ ಚಿಕಾಗೋ ನಗರದ ಬೀದಿಯಲ್ಲಿ ಅವರು ಸಂಚರಿಸುತ್ತಿದ್ದಾಗ ಒಬ್ಬ ವ್ಯಕ್ತಿ ಬಂದು ಅವರ ಪಾದಕ್ಕೆರಗಿ 'ಅಂದು ನನ್ನನ್ನು ಬದುಕಿಸಿದ ಮಹಿಮರು ನೀವೇ. ನೀವೇ ನನ್ನನ್ನೀಗ ಉದ್ಧರಿಸಬೇಕು' ಎಂದ. ವಿಚಾರಿಸಲಾಗಿ ಆತ ತನ್ನ ಕತೆಯನ್ನರುಹಿದ.' ನನ್ನ ಹೆಸರು ಡಿಕನ್ಸನ್. ನನಗೆ ಬಾಲ್ಯದಿಂದಲೇ ಆಧ್ಯಾತ್ಮಿಕ ಒಲವಿತ್ತು. 12 ವರ್ಷದ ಬಾಲಕನಾಗಿದ್ದಾಗ ನಾನೊಮ್ಮೆ ಅಕಸ್ಮಾತ್ ಆಗಿ ನೀರಿನ ಕೊಳಕ್ಕೆ ಬಿದ್ದು ಮುಳುಗಿ ಸಾಯುವ ಸ್ಥಿತಿಯಲ್ಲಿದ್ದೆ. ಆಗ ನನ್ನ ಮನದಲ್ಲಿ ದೇವರ ಸ್ಮರಣೆ ಉಕ್ಕಿತು. ಆಗಲೇ ತೇಜಸ್ವೀ ಕಾವಿಧಾರಿ ರೂಪವೊಂದು ನನ್ನ ಮನದಲ್ಲಿ ಕಾಣಿಸಿತು. ಮರುಕ್ಷಣವೇ ಯಾರೋ ನನ್ನನ್ನು ಆ ನೀರಿನಿಂದೆತ್ತಿ ಬದುಕಿಸಿದರು. ಭವಸಾಗರದಿಂದ ನನ್ನನ್ನು ಆ ವ್ಯಕ್ತಿ ಮೇಲೆತ್ತಿ ಪಾರು ಮಾಡು ವರೆಂದೇ ಅದರರ್ಥ ಎಂದೆಣಿಸಿ ಅವರಿಗಾಗಿ ನಾನು ಈ ತನಕ ಕಾಯುತ್ತಿದ್ದೆ. ಇಂದೀಗ ಕಾವಿಧಾರಿಯಾದ ನಿಮ್ಮನ್ನು ನೋಡಿದಾಗ ನನಗೆ ಅಂದಿನ ನೆನಪೇ ಆಗುತ್ತಿದೆ. ಅಂದು ನಾನು ಕಂಡುದು ನಿಮ್ಮನ್ನೇ ಎಂದೆಣಿಸಿದ್ದೇನೆ' ಎಂದವನೇ ಮುಂದುವರೆದು 'ನೀವೇ ಈಗ ನನ್ನ ಗುರು. ನನ್ನನ್ನು ಮುನ್ನಡೆಸಲಾರಿರಾ ?' ಎಂದ ವಿನೀತನಾಗಿ.

ಸ್ವಾಮಿ ವಿವೇಕಾನಂದರು ಕ್ಷಣಕಾಲ ಯೋಚಿಸಿ ನಕ್ಕು ನುಡಿದರು. ಮುಂದೆ ಭಾರತೀಯ ತತ್ತ್ವ ಶಾಸ್ತ್ರ ಪ್ರಸಾರಕ್ಕೆ ಶ್ರೀ ಪರಮಹಂಸ ಯೋಗಾನಂದರು ಅಮೇರಿಕೆಗೆ ಬರುವುದರ ಹಾಗೂ ಅವರ ಶಿಷ್ಯನಾಗಿ ಡಿಕನ್ಸನ್ ವಿಜೃಂಭಿಸುವುದರ ದರ್ಶನ ಆಗಲೇ ಅವರಿಗಾಗಿರಬೇಕು. ಆದ್ದರಿಂದಲೇ ಅವರು ದಿವ್ಯಧ್ವನಿಯಲ್ಲಿ – 'ಮಗೂ, ನಾನಲ್ಲ ನಿನ್ನ ಗುರು. ನಿನ್ನ ಗುರು ಬರಲಿದ್ದಾನೆ ಇನ್ನು. ಆತ ನಿನಗೆ ಬೆಳ್ಳಿಲೋಟ ಕೊಟ್ಟು ಹರಸುತ್ತಾನೆ' ಎಂದರು.

ತನ್ನ ಗುರುವಿಗಾಗಿ ತಡಕಾಡುತ್ತ ಡಿಕನ್ಸನ್ 32 ವರ್ಷಗಳನ್ನು ಕಳೆದ. 1925ರ ಕ್ರಿಸ್‌ಮಸ್‌ನ ಮುನ್ನಾ ದಿನ ಆತ ತನ್ನ ಗುರುವಿನ ಬರವಿಗಾಗಿ ತುಂಬ ವ್ಯಾಕುಲನಾಗಿ ಪ್ರಾರ್ಥಿಸಿದ. ಅಷ್ಟೊತ್ತಿಗೆ ಯಾರೋ ಮರುದಿನ ಸಂಜೆ ಪರಮಹಂಸ ಯೋಗಾನಂದರೆಂಬ ಕಾವಿಧಾರಿಯ ಉಪನ್ಯಾಸ ಇರುವುದಾಗಿ ಆತನಿಗೆ ತಿಳಿಸಿದರು. ಗುರುವಿಗಾಗಿ ಕಾತರಿಸುತ್ತ ಆತ ಅಲ್ಲಿಗೆ ತೆರಳಿ ಅವರ ಭೇಟಿಯಾದ. 43 ವರ್ಷಗಳ ಹಿಂದೆ ಸ್ವಾಮಿ ವಿವೇಕಾನಂದರು ಆಡಿದ್ದ ಮಾತು ದಿಟವಾಗಿತ್ತು. ಶ್ರೀ ಪರಮಹಂಸ ಯೋಗಾನಂದರು ಡಿಕನ್ಸನ್‌ಗೆ ಬೆಳ್ಳಿಯ ಲೋಟವನ್ನೇ ಉಡುಗೊರೆ ಯಾಗಿತ್ತರು. ಡಿಕನ್ಸನ್ ಅವರಲ್ಲಿ ತನ್ನ ಗುರುವನ್ನು ಕಂಡು ಧನ್ಯನಾದ.

– ಶ್ರೀ ಪರಮಹಂಸಯೋಗಾನಂದರ 'ಯೋಗಿಯ ಆತ್ಮಕತೆ'ಯಿಂದ.
ಸಂಗ್ರಹ: ಕುಮಾರದಾಸ ಟಿ. ಸಾಲಿಯಾನ್, ತೊಟ್ಟಂ

## ● ನುಡಿಮುತ್ತು ●

ಸತ್ಯವೇ ತಾಯಿ, ಜ್ಞಾನವೇ ತಂದೆ, ಧರ್ಮವೇ ಸೋದರನು, ದಯೆಯೇ ಸ್ನೇಹಿತ, ಶಾಂತಿಯೇ ಪತ್ನಿ, ಕ್ಷಮೆಯೇ ಪುತ್ರ – ಇವರೇ ಬಂಧು-ಬಾಂಧವರು.

– ಧರ್ಮರಾಯ

ಸಂಗ್ರಹ: ಲೀಲಾ ಬಾ, ಉಡುಪಿ





# ಕೃಪಾವಲೋಕನ



**ಸುಖ ದಾಂಪತ್ಯದ ಗುಟ್ಟೇ ಕ್ಷಮೆಯಲ್ಲಿದೆ. ಯಾರು ಯಾರನ್ನು ಕ್ಷಮಿಸಬೇಕೆಂಬ ಜಿದ್ದಿನಲ್ಲಿ ಮನಶ್ಶಾಂತಿ ಕಳೆದುಕೊಂಡಿದ್ದ ಮಸ್ಕತ್‌ನ ಶ್ರೀ ಗೋಪಾಲ ಶೆಟ್ಟಿ ಹಾಗೂ ಶ್ರೀಮತಿ ತಾರಾ ಶೆಟ್ಟಿ ದಂಪತಿಗಳು ಶ್ರೀ ಗುರೂಜೀ ಮಾರ್ಗದರ್ಶನದಿಂದ ತಮ್ಮ ಬಾಳಿನಲ್ಲಿ ಅನುಭವಿಸಿದ ಆನಂದ, ಶಾಂತಿಗಳ ಮಿಂಚು ನೋಟವನ್ನಿಲ್ಲಿ ಒದಗಿಸಿದ್ದಾರೆ. ನಿಮ್ಮ ಇಂಥ ಕೃಪಾಕಥನಕ್ಕೂ ಸ್ವಾಗತ.**

ನಾವಿಬ್ಬರೂ ದೇವರಲ್ಲಿ ವಿಶೇಷ ಭಕ್ತಿ ಹೊಂದಿದ್ದೆವು. ಆದರೆ ದೇವರಿಗೆ ನಮಸ್ಕರಿಸುವುದು, ದೇವರೊಡನೆ 'ಒಳಿತಾಗುವಂತೆ ಮಾಡು' ಎಂದು ಬೇಡುವುದಕ್ಕಿಂತ ದೇವರ ಬಗ್ಗೆ ಹೆಚ್ಚೇನೂ ಮಾಡುತ್ತಿರಲಿಲ್ಲ. ಕಷ್ಟಗಳು ಬಂದಾಗ ಉಪಶಮನಕ್ಕೆ ತಿಳಿದವರಿಂದ ಸತ್ಯನಾರಾಯಣ ಪೂಜೆ, ನವಗ್ರಹ ಪೂಜೆ ಇತ್ಯಾದಿಗಳನ್ನು ಮಾಡಿಸುತ್ತಿದ್ದೆ. ಆದರೂ ಅದೇನೋ ಆತಂಕ ನನ್ನನ್ನು ಕಾಡುತ್ತಿತ್ತು. ನನಗೆ ಎಷ್ಟೋ ಬಾರಿ ನನ್ನ ಮಾತನ್ನು ನನ್ನವಳು ಕೇಳಬೇಕು, ಅದರಂತೆ ನಡೆಯಬೇಕು ಎಂದೆನಿಸಿದರೆ, ಆಕೆಗೋ ತನ್ನ ಮಾತನ್ನೇಕೆ ನಾನು ಕೇಳಬಾರದೆಂಬ ಭಾವನೆ. ಇದರಿಂದುಂಟಾದ ಮುನಿಸಿನಿಂದ ಮನಶ್ಶಾಂತಿಯೇ ಕಲಕುವಂತಾಗಿತ್ತು. ನಮ್ಮಿಬ್ಬರ ಈ ಜಿದ್ದನ್ನು ಕೊನೆಗಾಣಿಸಲೆಂದೋ ಏನೋ ಆ ದೇವರು 1994-95ರಲ್ಲಿ ನಮ್ಮನ್ನು ಕಷ್ಟಗಳ ಮೂಸೆಗೊಡ್ಡಿದ. ಶತ್ರುಗಳು ದೇಶದ ಮೇಲೆ ಧಾಳಿ ಮಾಡಿದಾಗ ಪಕ್ಷಭೇದ ಮರೆತು ಎಲ್ಲರೂ ಅವರನ್ನೆದುರಿಸಿ ಹೋರಾಡುವಂತೆ, ಆ ಕಷ್ಟಗಳು ನಮ್ಮಿಬ್ಬರನ್ನೂ ಚಿಂತೆಗೀಡು ಮಾಡಿದವು. ನಾವು ಸರಿಯಾದ ದಾರಿಯಲ್ಲಿ ಹೋಗುತ್ತಿಲ್ಲವೇ? ಯಾವ ದಾರಿಯಲ್ಲಿ ಹೋದರೆ ಸರಿಯಾಗುತ್ತದೆ? ಎಂದು ತಿಳಿಹೇಳುವವರು ನನಗೆ ಬೇಕಾಗಿದ್ದರು. ಅಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಡಿವೈನ್ ಪಾರ್ಕ್‌ನ ಡಾಕ್ಟರ್ ಉಡುಪರಿಂದ ಅಂಥ ಮಾರ್ಗದರ್ಶನ ಸಿಗುವುದಾಗಿ ಮಿತ್ರ ಶ್ರೀ ರವೀಂದ್ರ ಕ್ಯಾಕಿಣಿ ಅವರಿಂದ ತಿಳಿದೆ. ಡಿವೈನ್ ಪಾರ್ಕ್‌ಗೆ ಹೋಗಲು ನನ್ನೆದೆ ತುಡಿಯಿತು. ಅಂತೂ 1995ರ ಮೇಯಲ್ಲಿ ಡಿವೈನ್ ಪಾರ್ಕ್‌ಗೆ ಹೋಗುವ ಯೋಗ ಬಂತು.

ಕಸ್ತೂರೀ ಮೃಗ ತನ್ನ ನಾಭಿಯಿಂದಲೇ ಪರಿಮಳ ಬರುತ್ತಿದ್ದರೂ ಅದನ್ನರಿಯದೆ ಆ ಪರಿಮಳದ ಮೂಲವನ್ನರಸುತ್ತ ಕಾಡಿನಲ್ಲೆಲ್ಲ ಅಲೆಯುವುದಂತೆ. ಅದೇ ರೀತಿ ನನ್ನೊಳಗೇ ಕಷ್ಟನಿವಾರಕ, ಇಷ್ಟಪ್ರದಾಯಕ ದೇವರನ್ನಿಟ್ಟುಕೊಂಡು ನಾನು ದೇವರ ಕೃಪೆಗಾಗಿ ಅವರಿವರ ಮೊರೆ ಹೋಗುತ್ತಿದ್ದೇನೆಂಬ ಅನುಭವ ಡಾಕ್ಟರ್‌ಜೀ ಅವರೊಡನೆ ಗೈದ ಸಂಭಾಷಣೆಯಿಂದಾಯಿತು. ಅದಕ್ಕಿಂತ ಹೆಚ್ಚು ಯಾರು, ಯಾರನ್ನು ಕ್ಷಮಿಸಬೇಕು, ಯಾರು ಯಾರಿಗೆ ವಿಧೇಯರಾಗಿರಬೇಕೆಂಬುದನ್ನು ನಮ್ಮ ಮನಮುಟ್ಟುವಂತೆ ಡಾಕ್ಟರ್‌ಜೀ ಹೇಳಿದರು. ಆ ಕ್ಷಣವೇ ನಮ್ಮ ಮನದ ಕತ್ತಲು ದೂರಾದಂತಾಯಿತು. ಶ್ರೀ ಗುರೂಜೀ ಕೃಪೆದೋರಿ ನನಗೊಂದು ಮಂತ್ರವನ್ನಿತ್ತು ಸರಳ ಸಾಧನಾ ಮಾರ್ಗ ಸೂಚಿಸಿದರು. ಅವರು ತೋರಿದ ಆ ಮಾರ್ಗ ನನ್ನ ಪಾಲಿಗೆ ಸಿರಿವರವೇ ಆಯಿತೆನ್ನುವಾಗ ಕಣ್ತುಂಬುತ್ತಿದೆ.

ಆನಂದ, ಶಾಂತಿಗಳೆಲ್ಲ ಅಳತೆಗೆ ನಿಲುಕವು. ಎಲ್ಲರೂ ತಮಗೆ ಸಿಕ್ಕಿದ್ದೇ ಮಹದಾನಂದ ಎಂದು ಬಾವಿಯ ಆ ಕಪ್ಪೆಯಂತೆ ಭ್ರಮಿಸುತ್ತಾರೆ. ಪರ್ವತವನ್ನು ಕಂಡಾಗಷ್ಟೇ ಗುಡ್ಡಕ್ಕೆ ತನ್ನ ಸಣ್ಣತನ ಗೊತ್ತಾಗುವಂತೆ ನಾವೇ ಸಾಧನಾ ಶೀಲರಾದಾಗ ನಮಗೆ ನಿಜವಾದ ಆನಂದ, ಶಾಂತಿಗಳ ಅನುಭವವಾಗಿ, ಮೊದಲು ನಾವು ಅನುಭವಿಸುತ್ತ ಭ್ರಮಿಸುತ್ತಿದ್ದುದು ಇದರೆದುರು ಏನೇನೂ ಅಲ್ಲ ಅನಿಸಿದೆ. ಮನೆಯಲ್ಲಿ ನಮ್ಮಲ್ಲಿ ತುಂಬ ಅನ್ಯೋನ್ಯತೆ ಬೆಸೆದು ನನ್ನ ಪಾಲಿಗೆ ಆನಂದ ಹೆಚ್ಚಿದರೆ, ನನ್ನ ಕೆಲಸವನ್ನೇ ಪೂಜೆ ಎಂದು ಮಾಡುವ ಮನೋಭಾವ ಬಲಿತು ನನ್ನ ಕೆಲಸದಿಂದಲೂ ಅತಿಶಯ ಸಂತೃಪ್ತಿ ನನಗೊದಗುವಂತಾಗಿದೆ. ನನ್ನ ಕಷ್ಟಗಳಲ್ಲೆಲ್ಲ ಶ್ರೀ ಗುರೂಜೀ ಮೊರೆಯೇ ನನ್ನನ್ನು ಕಾಪಾಡಿದೆ. ವ್ಯವಹಾರದಲ್ಲಿ ನಾನು ಹಾಕಿದ್ದ ಹಣ ನನ್ನ ಪಾಲಿಗೆ ನಷ್ಟವಾಗುವಂತಿದ್ದರೂ, ಶ್ರೀ ಗುರೂಜೀ ಕೃಪೆಯಿಂದ ಅದು ನನಗೆ ಸಿಗುವಂತಾಗಿದೆ. ನಮ್ಮ ಆರೋಗ್ಯ ವೃದ್ಧಿಗೂ, ಉದ್ಯೋಗದಲ್ಲಿ ಭಡ್ತಿಗೂ ಶ್ರೀ ಗುರೂಜೀ ಮಂತ್ರವೇ ಟಾನಿಕ್ ಆಗಿದೆ. ಶ್ರೀ ಗುರೂಜೀ ಮುಖವಾಣಿ 'ವಿವೇಕ ಸಂಪದ'ವೇ ನನ್ನ ನಿತ್ಯ ಪಾರಾಯಣ ಗ್ರಂಥವಾಗಿದೆ. ಶ್ರೀ ರಾಮರಕ್ಷಾಸ್ತೋತ್ರಪಠಣ ಹಲವು ಅವಘಡಗಳಿಂದ ನಮ್ಮನ್ನು ಪಾರು ಮಾಡಿ ನಮ್ಮನ್ನು ಕಾಯ್ದಿದೆ. ನಮ್ಮಲ್ಲಾದ ಅದ್ಭುತ ಪ್ರಗತಿ ನೋಡಿ ನನ್ನ ಆತ್ಮೀಯರು ಅದರ ಗುಟ್ಟೇನೆಂದು ನನ್ನೊಡನೆ ಕೇಳಿದ್ದುಂಟು. ಆಗ ನಾನವರಿಗೂ ಶ್ರೀ ಗುರೂಜೀಯ ಕೃಪೆಯ ಬಗ್ಗೆ ಹೇಳಿ ಡಿವೈನ್ ಪಾರ್ಕ್ ಅನ್ನು ಪರಿಚಯಿಸಿದ್ದೇನೆ. ಇದರಿಂದ ಅವರೆಲ್ಲರಿಗೂ ಶ್ರೀ ಗುರೂಜೀ ಕೃಪೆಯ ಅನುಭವ ಆಗಿದೆ.

ಸದಾ ದಾರಿತೋರಿ ಮುನ್ನಡೆಸುವ ಗುರೂಜೀಯೇ ನಮ್ಮ ಬಾಳಿನ ಸೌಭಾಗ್ಯ. ಅವರೇ ನಮ್ಮ ಸರ್ವಸ್ವ. ನಾವು ಗಳಿಸುವ ಆನಂದ, ಶಾಂತಿಗಳೆಲ್ಲ ವೃದ್ಧಿಸುತ್ತಿರುವಂತೆ ನಾನು ಹೇಗೆ ಅವರ ಋಣ ತೀರಿಸಲಿ ಎಂದು ನನ್ನೆದೆ ತುಡಿಯುತ್ತಿದೆ. 'ವಿವೇಕ ಸಂಪದ'ವನ್ನು ಪ್ರಸಾರ ಮಾಡಲೂ, ದೂರದ ಈ ಊರಿನಲ್ಲೂ ಶ್ರೀ ಗುರೂಜೀಯ ಕೃಪೆಯ ಓಯಸಿಸ್ ನಿರ್ಮಿಸಲು ಡಿವೈನ್ ಸ್ಪಾರ್ಕ್‌ನ ಸಂಘಟನೆಯಲ್ಲಿ ಒಂದಾಗಿ ದುಡಿಯಲೂ ನಮ್ಮನ್ನು ಪ್ರೇರಿಸುತ್ತಿರುವುದು ಆ ತುಡಿತವೇ. ಶ್ರೀ ಗುರೂಜೀ ನಮಗೆ ನಮ್ಮಲ್ಲೇ ಇರುವ ದೇವರನ್ನು ತೋರಿಸಿದರು. ನಮಗೇ ದೇವರಾಗುವ ದಾರಿ ತೋರಿಸಿದರು. ಹಾಗಾಗಿ ನನಗಿಂದು ಯಾವ ಆತಂಕ ಬಂದರೂ ಸತ್ಯನಾರಾಯಣ ಪೂಜೆ, ನವಗ್ರಹ ಪೂಜೆಯೆಂದು ನಾನು ಅವರಿವರಲ್ಲಿ ಓಡುತ್ತಿಲ್ಲ. ಶ್ರೀ ಗುರೂಜೀ ನಾಮಸ್ಮರಣೆಯೇ ನನ್ನ ಪಾಲಿಗೆ ಕಾಮಧೇನು, ಕಲ್ಪವೃಕ್ಷ. ಶ್ರೀ ಗುರೂಜೀ ಬಯಸುವ ಆದರ್ಶ ದಂಪತಿಗಳಾಗಿ ಬದುಕಿ, ಶ್ರೀ ಗುರೂಜೀ ಸೇವೆಗೈಯುತ್ತ ಶ್ರೀ ಗುರೂಜೀ ಪದತಳ ಸೇರುವ ಹಂಬಲ ನನ್ನದು. ಪಶುತ್ವದಿಂದ ನಮ್ಮನ್ನು ಮನುಷ್ಯರನ್ನಾಗಿಸಿದ ಗುರೂಜೀ ದೈವತ್ವದ ಮಟ್ಟಕ್ಕೂ ಏರಿಸಿಯೇ ಏರಿಸುತ್ತಾರೆಂಬ ಅಚಲ ನಂಬಿಕೆ ನಮ್ಮದು.



ದಿನಮಪಿ ರಜನೀ ಸಾಯಂ ಪ್ರಾತಃ
ಶಿಶಿರ ವಸಂತೌ ಪುನರಾಯಾತಃ।
ಕಾಲಃ ಕ್ರೀಡತಿ ಗಚ್ಛತ್ಯಾಯುಃ
ತದಪಿ ನಮುಂಚತ್ಯಾಶಾವಾಯುಃ॥
ಕ್ಷಣಶಃ ಕಣಶಶ್ಚೈವ
ವಿದ್ಯಾಮರ್ಥಂಚ ಸಾಧಯೇತ್।
ಗೃಹೀತ ಇವಕೇಶೇಷು
ಮೃತ್ಯುನಾಧರ್ಮಮಾಚರೇತ್॥

ಬೆಳಗಾಗುತ್ತದೆ. ಹೊತ್ತು ಮೇಲೇರಿ ಮಧ್ಯಾಹ್ನವಾಗಿ ಸಂಜೆಯೂ ಬರುತ್ತದೆ. ರಾತ್ರಿಯೂ ಆಗಿ ಪುನಃ ಬೆಳಕು ಹರಿದು ಬೆಳಗಾಗುತ್ತದೆ. ಬೇಸಿಗೆ ಕಳೆದು, ಮಳೆ ಸುರಿದು, ಚಳಿ ಕೊರೆದು ಪುನಃ ಬೇಸಿಗೆ ಕಾಲಿಡುತ್ತದೆ. ಕಾಲಚಕ್ರ ಹೀಗೆ ತಿರುಗುತ್ತಲೇ ಇದೆ. ಆಯುಷ್ಯ ಕಳೆಯುತ್ತಲೇ ಇದೆ. ಆದರೂ ಜೀವನದ ಗುರಿಯೆಡೆಗೆ ಬಿಡದೆ ಸಾಗಲು ನೂರಾರು ಆಶೆಗಳ ಪಾಶ ಬಿಡುತ್ತಿಲ್ಲವಲ್ಲ! ನಾಳೆಯೇ ಸಾವು ಬರುವುದೆಂದೆಣಿಸಿ ಇಂದೇ ಕ್ಷಣಕ್ಷಣವನ್ನೂ, ಪೈಸೆಪೈಸೆಯನ್ನೂ ಸದ್ವಿನಿಯೋಗಿಸಬೇಕು! ಆಗಲೇ ಎಂಥ ಸಾಹಸ ಸಾಧನೆಯೂ ಸಾಧ್ಯ! ಅದರಿಂದಲೇ ಜೀವನ ಆಗುವುದು ಮಧುರ ವಾದ್ಯ!

*ಶುಭ ಹಾರೈಕೆಗಳೊಂದಿಗೆ –*

**ಶ್ರೀ ಬಿ. ಪದ್ಮನಾಭ ಸಾಲಿಯಾನ್**
**ಜೀವವಿಮಾ ಏಜಂಟರು**
**ಮಂಗಳಾದೇವಿ ರಸ್ತೆ, ಬೋಳಾರ**
**ಮಂಗಳೂರು–575 001**



ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ
ಯಾತಿಕ್ಷಯಂ ಯೌವನಂ।
ಪ್ರತ್ಯಾಯಾಂತಿ ಗತಾಃ ಪುನರ್ನ
ದಿವಸಾಕಾಲೋ ಜಗದ್ಭಕ್ಷಕಃ॥
ಲಕ್ಷ್ಮೀಸ್ತೋತ್ರ ತರಂಗ ಭಂಗ
ಚಪಲಾ ವಿದ್ಯುತ್ ಛಲಂ ಜೀವಿತಂ।
ತಸ್ಮಾನ್ ಮಾಂ ಶರಣಾಗತಂ ಶರಣಮ್
ತ್ವಂ ರಕ್ಷ ರಕ್ಷಾಧುನಾ॥

ಸಮುದ್ರದ ತೆರೆ ಸೊಕ್ಕಿನಿಂದ ಉಕ್ಕಿಬಂದು ದಡಕ್ಕಪ್ಪಳಿಸಿ ಅಳಿಯುತ್ತದೆ. ಆಗಸದಲ್ಲಿ ಮಿಂಚಿನ ಬಳ್ಳಿ ಮೂಡಿ ಮೆರೆದು ಮರೆಯಾಗುತ್ತದೆ. ಜೀವನದಲ್ಲೂ ಬಾಲ್ಯ ಕಳೆದು ಯೌವನ ಬಂದು ಮುಪ್ಪಡರುವ ದಿನವೂ ಬೇಗ ಬರುತ್ತದೆ. ಇಂದು ನಿನ್ನೆಯಾಗುತ್ತಾ, ನಾಳೆ ಇಂದು ಆಗುತ್ತ ಮನುಕುಲದ ಚರಿತೆಯೆಲ್ಲ ಕಾಲಗರ್ಭ ಸೇರುತ್ತಲೇ ಇದೆ. ನೀರಿನ ಮೇಲಿನ ಅಲೆಯಂತೆ ಸಂಪತ್ಸಮೃದ್ಧಿಯಲ್ಲಿ ಭಂಗುರ, ಆಗಸದಲ್ಲಿ ಮೂಡುವ ಮಿಂಚಿನಂತೆ ಬಾಳೆಲ್ಲ ಕ್ಷಣಿಕ. ಈ ನಶ್ವರತೆಯ ಕುಲುಮೆಯಿಂದ ಈಶ್ವರತೆಯ ಬಾಳ ಚಿಲುಮೆ ಉದಿಸಲು ಆ ದೇವರ ಮೊರೆ ಹೋಗುವುದೊಂದೇ ದಾರಿ. ಆತನೇ ಎಲ್ಲ ಬಲ್ಲ! ಅವನಿಂದಲೇ ಬಾಳೆಲ್ಲ ಬೆಲ್ಲ!

*ಶುಭ ಹಾರೈಕೆಗಳೊಂದಿಗೆ –*

**ಉಲ್ಲಾಸ ಗಾರ್ಮೆಂಟ್ಸ್ ಮತ್ತು**
**ನವೋಲ್ಲಾಸ ಕ್ಯಾಸೆಟ್ಸ್**
**ಮುಖ್ಯರಸ್ತೆ**
**ಕ್ಯಾತನಹಳ್ಳಿ–571 427**
**ಪಾಂಡವಪುರ ತಾಲೂಕು**



**Art is long, and Time is fleeting**
**And our hearts, though stout and brave**
**Still, like muffled drums, are beating**
**Funeral marches to the grave**

ಅದನ್ನು ಮಾಡಬೇಕು, ಇದನ್ನು ಮಾಡಬೇಕು. ...ಬೇಕು ...ಬೇಕು ಎಂದೆಲ್ಲ ಅದಿದನ್ನು ಎಣಿಸಿಕೊಳ್ಳುವುದೇನೋ ಹೌದು. ಆದರೆ ಅದನ್ನೆಲ್ಲ ಮಾಡಲು ಸಮಯ ಸಿಕ್ಕೀತೆ? ಆಯುಷ್ಯವಂತೂ ಭರದಿಂದ ಕಳೆದೇ ಹೋಗುತ್ತಿದೆ. ದಿನವೂ ನಾವು ಹಳಬರಾಗುತ್ತಿದ್ದೇವೆ. ಸಾವಿಗೆ ಸಮೀಪವಾಗುತ್ತಿದ್ದೇವೆ. ಹಾಗಿರುವಾಗ ಇಂದಾಗದೇ ಇರುವುದು ನಾಳೆ ಕೈಗೂಡುವುದು ಸಾಧ್ಯವೇ? ಇಂದಿನ heatsನಲ್ಲಿ ಗೆಲ್ಲದವರು ನಾಳಿನ finalನಲ್ಲಿ ಭಾಗವಹಿಸುವುದು ಹೇಗೆ? ಆದ್ದರಿಂದ ಇಂದು ಮಾಡಬೇಕೆಂದೆಣಿಸಿದುದನ್ನು ಇಂದೇ ಚೆನ್ನಾಗಿ ಮಾಡಿ ಮುಗಿಸಿ! ನಿಮ್ಮ ಕ್ರಿಯಾಶಕ್ತಿಯು ಇಚ್ಛಾಶಕ್ತಿಯನ್ನು ಬೆಂಬತ್ತಿಯೇ ಸಾಗಲಿ. ಆಗಲೇ ಮಹತ್ ಸಾಹಸ ಸಾಧನೆಯ ಕನಸು ನನಸು!

*With Best Compliments from:*

**M/S POLYMER HOUSE**

Adm. Office:
8, SAINATH CHAMBERS
Sainath Road, Malad (W)
Mumbai–400 064

Regd. Office:
3, TIWARI BHAVAN
Near Subway Garden
Malad (W) Mumbai–400 064

**PROF: HARSHAD VORA**
Phones: (O) 8896780, 8896781, 8890534
Fax No. 91-22-8896782



**Trust no Future, howe'er pleasant!**
**Let the dead Past bury its dead!**
**Act-act in the living Present!**
**Heart within, and God o'erhead!**

ಜೀವನದಲ್ಲಿ ಹೆಚ್ಚಿನದನ್ನು ಸಾಧಿಸಬೇಕೆಂದಿದೆಯೇ? ಹಾಗಾದರೆ ನಾಳಿನ ಕನಸುಗಳ ಗೋಪುರದಲ್ಲಿ ವಿಹರಿಸುತ್ತ ಹಿರಿಹಿರಿ ಹಿಗ್ಗಬೇಡಿ. ನಿನ್ನೆಯ ಚಿಂತೆಯ ಚಿತೆಯಲ್ಲಿ ಬೇಯುತ್ತ ಬಳಲಿ ಬೆಂಡಾಗಬೇಡಿ. ಕಾರಿನ ಚಾಲಕನೊಬ್ಬ ಬರಲಿರುವ ಚೆನ್ನೂರಿನ ಕನಸು ಕಾಣುತ್ತಲೋ ಹಿಂದೆ ಸರಿದ ಕಾಳೂರಿನ ಘಟನೆ ನೆನಪಿಸುತ್ತಲೋ ಕಾರನ್ನು ಚಲಾಯಿಸಿದಂತೆಯೇ ಅದು. ಯಾನ ಯಶಸ್ವಿಯಾಗಲು ಆತ ತನ್ನೆದುರಿನ ನೋಟದಲ್ಲೇ ದೃಷ್ಟಿ ನೆಟ್ಟಿರಬೇಕಾದಂತೆ ಬಾಳಿನ ಯಾನದಲ್ಲೂ ವರ್ತಮಾನ ಕಾಲದ ಕ್ಷಣಕ್ಷಣದಲ್ಲೂ ಆ ದೇವರ ಮೇಲೆ ಭಾರ ಹಾಕಿ ಆತ್ಮವಿಶ್ವಾಸದಿಂದ ಮುನ್ನುಗ್ಗುವುದರಿಂದಷ್ಟೇ ಶ್ರೇಯಸ್ಸಿನ ಶಿಖರ!

*With Best Compliments from:*

**M/S SONIT ELECTRONICS**
**2011, 2nd Floor, Bhandup Industrial Estate**
**L.B.S. Marg, Bhandup (West)**
**MUMBAI–400 078**

**PROP: PRAMOD CHOUDHARY**
**Phone: 5678072**

# ಉದ್ಯೋಗದ ಪರಿ – ದೇವರೊಲುಮೆಗೆ ದಾರಿ



'ನಾನು ಕಳೆದ ಹತ್ತು ವರ್ಷಗಳಿಂದಲೂ ಹೋಟೆಲಿನ ಸಪ್ಲೈಯರ್ ಆಗಿ ದುಡಿಯುತ್ತಿದ್ದೇನೆ. ಕೆಲವು ವರ್ಷಗಳ ಹಿಂದೆ ಗಿರಾಕಿಯೊಬ್ಬರ ಬಳಿ ಇದ್ದ 'ವಿವೇಕ ಸಂಪದ'ದಿಂದ ಆಕರ್ಷಿತನಾದ ನಾನು ಇಂದಿನ ವರೆಗೂ ಅದನ್ನು ತಪ್ಪದೆ ಓದುತ್ತ ಬಂದಿದ್ದೇನೆ. 'ದೇವರು ಬೇಕು, ದೇವರನ್ನು ನೋಡಬೇಕು' ಎಂಬ ಭಾವ ನನ್ನಲ್ಲಿ ಬಲವಾದ್ದೇ ಅದರಿಂದ. ಆದರೆ ಈ ಸಪ್ಲೈಯರ್ ಉದ್ಯೋಗದ ನನಗೂ ದೇವರನ್ನು ನೋಡಲಾದೀತೇ? ಬೆಳಗ್ಗೆ ಗಂಟೆ 6ರಿಂದ ರಾತ್ರಿ ಗಂಟೆ 9ರ ತನಕವೂ ದುಡಿಯಬೇಕಾದ ನಾನು ಆ ಬಗ್ಗೆ ಕಠೋರ ಜಪತಪ ಮಾಡುವ ಸ್ಥಿತಿಯಲ್ಲಿಲ್ಲ. ಅವುಗಳಿಲ್ಲದೆ ದೇವರೊಲುಮೆ ಸಾಧ್ಯವೇ? ಅದಕ್ಕೆ ನಾನೇನು ಮಾಡಬೇಕು? ದಯಮಾಡಿ ತಿಳಿಸಿ ಮುನ್ನಡೆಸಲಾರಿರಾ ಪ್ರಭೂ?' ಎಂದೇ ಶ್ರೀ ಗುರೂಜೀಯವರಲ್ಲಿ ನಿವೇದಿಸಿಕೊಂಡಿರುವ ಮಳವಳ್ಳಿಯ ಶ್ರೀ ಚಂದ್ರಕಾಂತರ ಪ್ರಶ್ನೆಗಳಿಗಿಲ್ಲಿ ಉತ್ತರಿಸಿರುವ ಗುರೂಜೀ, ದೇವರೊಲುಮೆ ಗಳಿಸಲು ಉದ್ಯೋಗ ಯಾವುದೆಂಬುದು ಮುಖ್ಯ ಅಲ್ಲ. ಉದ್ಯೋಗವನ್ನು ಹೇಗೆ ಮಾಡುವರೆಂಬುದೇ ಮುಖ್ಯ ಎನ್ನುತ್ತ ದೇವರು ಮೆಚ್ಚುವ ದಿನಚರಿಯನ್ನಿಲ್ಲಿ ಬಯಲು ಮಾಡಿದ್ದಾರೆ. ಶ್ರೀ ಗುರೂಜೀಯ ಮಾತುಗಳು ಎಲ್ಲ ಉದ್ಯೋಗದವರಲ್ಲೂ ಭರವಸೆ ತುಂಬಿ ಎಲ್ಲರನ್ನೂ ದೇವರೊಲುಮೆ ಗಳಿಸುವ ದಾರಿಯಲ್ಲಿ ಮುನ್ನಡೆಸುವಂತಾಗಲಿ!

**ಒಳಗೇನೇ ಇರುವ, ಕರೆದಾಗ ಓಗೊಡುವ!**

ನೀರನ್ನು ಯಾರು ಕುದಿಸಬಲ್ಲರು? ನೀರನ್ನು ಕಾಯಿಸುವ ಎಲ್ಲರೂ ನೀರನ್ನು ಕುದಿಸಬಲ್ಲರಲ್ಲವೇ? ಅವರಿಗೆ ಇವರಿಗೆ ಸಾಧ್ಯವಾಗುವ ನೀರನ್ನು ಕುದಿಸುವ ಕೆಲಸ ನನಗೆ ಸಾಧ್ಯವಾದೀತೇ ಎಂದು ಪ್ರಶ್ನಿಸುವುದು ಹೇಗೆ ಸಮಂಜಸವಲ್ಲವೋ ಹಾಗೆ 'ಸಪ್ಲೈಯರು ಆದ ನನಗೆ ದೇವರೊಲುಮೆ ಸಾಧ್ಯವೇ?' ಎಂಬ ನಿಮ್ಮ ಶಂಕೆಯೂ ಅಸಮಂಜಸ. ದೇವರಿರುವುದೇ ಒಲಿಯಲು, ಒಲುಮೆ ತೋರಲು. ಆದರೆ ಕೇವಲ 90 ಡಿಗ್ರಿ ಸೆಲ್ಸಿಯಸ್ ಉಷ್ಣತೆಗೆ ನೀರನ್ನು ಕಾಯಿಸಿದಾಗ ಅದು ಹೇಗೆ ಕುದಿಯಲಾರದೋ ಹಾಗೆ ಆ ದೇವರು ಪರಮಪ್ರೀತಿಯ ಕರೆ, ಮೊರೆ ಇಲ್ಲದಲ್ಲಿ ಒಲಿದು ನಲಿಯಲಾರ. ನಿಮಗೆ ದೇವರು ಬೇಕು, ದೇವರೇ ಬೇಕು ಎಂದಾದಲ್ಲಿ ಮಾತ್ರ ದೇವರಿಗೂ ನೀವು ಬೇಕು. ನೀವೇ ಬೇಕು.

'ದೇವರು ಯಾವಾಗ ಒಲಿಯುವನು?' ಎಂದು ಕೇಳಿದವರಿಗೆ ಗುರುದೇವ ಶ್ರೀ ರಾಮಕೃಷ್ಣರೆನ್ನುತ್ತಿದ್ದರು—'ತಾಯಿಗೆ ಮಗುವಿನ ಮೇಲಿನ ಪ್ರೀತಿ, ಹೆಂಡತಿಗೆ ಗಂಡನ ಮೇಲಿನ ಪ್ರೀತಿ, ಲೋಭಿಗೆ ಹಣದ ಮೇಲಿನ ಪ್ರೀತಿ—ಈ ಎಲ್ಲ ಪ್ರೀತಿಗಳ ಮೊತ್ತದಷ್ಟು ಪ್ರೀತಿಯಿಂದ ದೇವರನ್ನು ಕರೆದರೆ ದೇವರೊಲಿದು ಓಡೋಡಿ ಬರುತ್ತಾನೆ' ಎಂದು. ದೇವರೊಲುಮೆ ಬೇಕೆನ್ನುವ ನೀವೀಗ ನಿಮ್ಮಲ್ಲಿ ದೇವರಿಗಾಗಿ ಅಂಥ ಅತಿಶಯ ಪ್ರೀತಿಯ ತುಡಿತ

## ದೇವರ ದರುಶನದ ಸೋಪಾನ

ಪ್ರತಿಯೊಂದು ಉದ್ಯೋಗಕ್ಕೂ ಅದರದೇ ಆದ ಅರ್ಹತೆ ಇರುವಂತೆ ದೇವರ ದರುಶನ ಭಾಗ್ಯ ಒದಗಲೂ ಮೂಲಭೂತವಾದ ಅರ್ಹತೆ ಯೊಂದಿದೆ. ದೇವರಾಗಿಸುವ 12 ಮಂದಿ ಆದ ಭಕ್ತಿ, ವಿಧೇಯತೆ, ಶ್ರದ್ಧೆ, ಶರಣಾಗತಿ, ವ್ಯಾಕುಲತೆ, ಏಕಾಗ್ರತೆ, ಏಕನಿಷ್ಠೆ, ಪ್ರೀತಿ, ತಾಳ್ಮೆ, ಕ್ಷಮೆ, ಕರ್ತವ್ಯಪರತೆ, ನಿಸ್ವಾರ್ಥತೆಗಳನ್ನು ಮೈಗೂಡಿಸಿಕೊಂಡಿರುವುದೇ ಆ ಅರ್ಹತೆ. ಹೀಗೆ ದೇವರಿದ್ದಾನೆ ಎಂಬ ದೃಢ ನಿಲುವು (ಭಕ್ತಿ) ಒಡಮೂಡಿ, ದೇವರು ಮೆಚ್ಚುವ ರೀತಿಯ ನಡೆ (ವಿಧೇಯತೆ) ನಿಮ್ಮದಾಗಬೇಕು. ಆ ದೇವರನ್ನೇ ನಿಮ್ಮಲ್ಲಿ ತುಂಬಿಕೊಳ್ಳುವ ತುಡಿತ (ಶ್ರದ್ಧೆ)ದಿಂದ, ಆ ದೇವರಿಗೆ ನಿಮ್ಮನ್ನೇ ಸಮರ್ಪಿಸಿ (ಶರಣಾಗತಿ) ಕೊಳ್ಳಬೇಕು. ಆಗ ಆ ದೇವರನ್ನು ಕಾಣಬೇಕೆಂಬ ತೀವ್ರ ಕಾತರತೆ (ವ್ಯಾಕುಲತೆ) ಉದಿಸಿ, ನಿಮ್ಮ ಮನಸ್ಸು ಆ ದೇವರಲ್ಲೇ ನೆಡಲ್ಪಡುತ್ತದೆ. (ಏಕಾಗ್ರತೆ); ದೇವರುಗಳಲ್ಲಿನ ಭೇದಭಾವವೆಲ್ಲ ಅಳಿದು ಎಲ್ಲ ದೇವರೂ ಒಂದೇ (ಏಕನಿಷ್ಠೆ) ಎಂಬ ಅನುಭಾವ ಉಂಟಾಗುತ್ತದೆ. ದೇವರ ಸಂಬಂಧವಾಗಿ ಅಂಕುರಿಸುವ ಈ ಗುಣಗಳಂತೆಯೇ ಆಗ ಮನುಷ್ಯರ ನಡುವಣ ಬಾಂಧವ್ಯ ಬಲವಾಗಿಸುವ ದೈವೀಗುಣಗಳೂ ಚಿಗುರೊಡೆಯಬೇಕು. ಎಲ್ಲರಲ್ಲೂ ಆ ದೇವರಿರುವುದರಿಂದ ಎಲ್ಲರಲ್ಲೂ ಆತ್ಮೀಯತೆಯ ಅನುಬಂಧ (ಪ್ರೀತಿ) ಉಂಟಾಗಿ, ದೈವೇಚ್ಛೆಗೆ ಶರಣಾಗಿ ಎಲ್ಲವನ್ನೂ ನಗುನಗುತ್ತ ಸ್ವೀಕರಿಸುವ ಗುಣ (ತಾಳ್ಮೆ) ನಿಮ್ಮಲ್ಲಿ ಬಲಿಯಬೇಕು. ಜೊತೆಗೆ ಎಂಥ ಕಹಿ ಪ್ರಸಂಗವನ್ನು ಮರೆತು ಮನ್ನಿಸಿ ಸೌಹಾರ್ದದಿಂದ ವರ್ತಿಸುವ ಗುಣ (ಕ್ಷಮೆ) ಮೈಗೂಡಬೇಕು. ದೇವರೇ ಎಲ್ಲವನ್ನೂ ನೋಡುತ್ತ ಸದ್ದಿಲ್ಲದೆ ಪರೀಕ್ಷಿಸುತ್ತಿರುವುದರಿಂದ ಮಾಡುವ ಕೆಲಸವನ್ನು ಏಕನಿಷ್ಠೆಯಿಂದ ಮಾಡುವ ಸ್ವಭಾವ (ಕರ್ತವ್ಯಪರತೆ) ಅರಳಬೇಕು. ಆಗ 'ನಾನಿಲ್ಲ, ನೀನೇ ಎಲ್ಲ, ನಿನಗೇ ಎಲ್ಲ' ಎಂಬ ನಾನು ರಹಿತ ಭಾವ (ನಿಸ್ವಾರ್ಥತೆ) ಕಂಗೊಳಿಸುತ್ತದೆ. 'ನಾನು' ಭಾವ ಅಳಿಯುತ್ತಲೇ, 'ಭಾನು' ಆದ ಆ ದೇವರು ಮನೋದಿಗಂತದಲ್ಲಿ ಕಾಣಿಸಿ ತನ್ನ ಲೀಲೆ ತೋರುತ್ತಾನೆ. ಪರ್ವತ ಶಿಖರಕ್ಕೇರಲಿರುವ ಮೆಟ್ಟಿಲುಗಳಂತೆ ಈ ಗುಣರತ್ನಗಳೆಲ್ಲವೂ ಆ ದೇವರ ದರುಶನದ ದಿವ್ಯಾನುಭವದ ಶಿಖರಕ್ಕಿರುವ ಸೋಪಾನಗಳು. ಈ ಸೋಪಾನಗಳನ್ನೇರಿ ಸಾಗುವ ಯಾರಿಗಾದರೂ ಆ ದೇವರ ದಿವ್ಯಾನುಭವ ಆಗದಿರದು.



# ಬೇಗ ಬನ್ನಿ, ಬೆಳಕ ತನ್ನಿ!
# ಕಾಯುತಿಹೆವು ಹೇ ಗುರೂಜೀ!



ಭತ್ತ, ಕಬ್ಬು, ತೆಂಗು, ಬಾಳೆಗಳಿಂದ ಸಮೃದ್ಧವಾಗಿರುವ ನಮ್ಮ ಕ್ಯಾತನಹಳ್ಳಿಯ ಪರಿಸರದಲ್ಲಿ ದಿವ್ಯ ಕೃಪೆಯ ಫಸಲನ್ನೀಯಲು ಇನ್ನೇನು ಮೂಡಿ ಬರಲಿದೆ ಸ್ವಾಮಿ ವಿವೇಕಾನಂದ ಮಂದಿರ! ಹೊರಗಡೆ ಬೆಳ್ಳಂಬೆಳಕಿದ್ದರೂ ಕಿಟಕಿ, ಬಾಗಿಲು ತೆರೆದಲ್ಲಿ ಮಾತ್ರ ಆ ಬೆಳಕು ಒಳ ಸೇರುವಂತೆ, ಅನನ್ಯ ಭಕ್ತಿ-ಶ್ರದ್ಧೆ-ವ್ಯಾಕುಲತೆಗಳಿಂದ ನೀವು ನಿಮ್ಮ ಹೃದಯ-ಮನಸ್ಸುಗಳ ಬಾಗಿಲನ್ನು ತೆರೆದಲ್ಲಿ ಮಾತ್ರ ಶ್ರೀ ಗುರೂಜೀಯ ಭವ್ಯಕೃಪೆಯ ದಿವ್ಯಾನುಭವ ನಿಮ್ಮದಾದೀತು! ಅಂಥ ಭವ್ಯಕೃಪಾಯುಗದ ಉದಯ ಬೇಗ ಆಗುವಂತೆ ಆಂತರ್ಯವನ್ನು ಭಕ್ತಿ, ಶ್ರದ್ಧೆ, ವ್ಯಾಕುಲತೆಗಳಿಂದ ಸಜ್ಜುಗೊಳಿಸಿಕೊಂಡು ಶ್ರೀ ಗುರೂಜೀ ಬರವಿಗಾಗಿ ಕಾಯುವ ಭಾಗ್ಯ ನಮ್ಮದಾಗಲಿ!

ನಿಜವಾದ ಪ್ರೀತಿ ವ್ಯಕ್ತವಾಗುವುದು ತ್ಯಾಗ ಮತ್ತು ಸೇವೆಗಳ ಮೂಲಕ. ಪ್ರೀತಿ ಅರಳಿದಾಗ ಬೀರುವ ಸೌರಭವೇ ತ್ಯಾಗ ಮತ್ತು ಸೇವೆ. ಪ್ರೀತಿ ಪಾತ್ರರ ಮೆಚ್ಚುಗೆಗಾಗಿ ಎಂಥ ಸೇವೆಗೂ, ಪ್ರೀತಿ ಪಾತ್ರರಿಗಾಗಿ ಎಂಥ ತ್ಯಾಗಕ್ಕೂ ನಿಮ್ಮ ಜೀವ ತುಡಿಯುವಂತಾಗುವುದೇ ನಿಮ್ಮಲ್ಲಿ ನಿಜವಾದ ಪ್ರೀತಿ ಉಕ್ಕುತ್ತಿದೆ ಎಂಬುದಕ್ಕೆ ಸಾಕ್ಷಿ. ಶ್ರೀ ಗುರೂಜೀಯಲ್ಲಿ ನಿಮಗೆ ಪರಮ ಪ್ರೀತಿ ಎನ್ನುವಿರಲ್ಲವೇ? ಶ್ರೀ ಗುರೂಜೀಯಲ್ಲಿ ನಿಮ್ಮ ಪ್ರೀತಿ ಯಥಾರ್ಥವಾಗಿದ್ದರೆ ಶ್ರೀ ಗುರೂಜೀಗಾಗಿ ನಿಮ್ಮ ಕಿಂಚಿತ್ತನ್ನು ದೇಣಿಗೆಯಾಗಿತ್ತು, ನಿಮ್ಮ ಅಳಿಲ ಸೇವೆ ಸಲ್ಲಿಸದಿರಲು ಸಾಧ್ಯವೇ? ನಮಗಿಂದು ಬೇಕಾಗಿದೆ ಅಂಥ ಗುರೂಜೀ ನಿಷ್ಠ ಭಕ್ತರ ಪ್ರೀತಿಯ ಕೊಡುಗೆ!

**ಉದಾರಿಗಳ ಯಾದಿಯ ಮುಂದುವರಿದ ಭಾಗ ಇಲ್ಲಿದೆ.**
**ಉದಾರ ದೇಣಿಗೆಯನ್ನೀಯುವ ಮೂಲಕ ಶ್ರೀ ಗುರೂಜೀ ಕೃಪಾಯುಗದ ಬಾಗಿಲು ತೆರೆಯಲು ನೆರವಾದವರು ಇವರು —**
**ಇವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.**

★ ಡಿವೈನ್ ಪಾರ್ಕ್ ಟ್ರಸ್ಟ್ (ರಿ.), ಸಾಲಿಗ್ರಾಮ (ರೂ. 33,333.35) ★ ಶ್ರೀ ಮತ್ತು ಶ್ರೀಮತಿ ನಾಗಪ್ಪ ಗೋಳಿ, ಮೈಸೂರು (ರೂ. 10,000) ★ ಶ್ರೀ ಬಿ. ಜೆ. ಎನ್. ಹೊಳ್ಳ, ಮಣೂರು (ರೂ. 5,023) ★ ಶ್ರೀ ಮತ್ತು ಶ್ರೀಮತಿ ಸುಬ್ಬಣ್ಣ, ಸುಳ್ಯ (ರೂ. 5,009) ★ ಶ್ರೀ ಎಸ್. ಎನ್. ಶ್ರೀರಾಮ್, ಬೆಳಗಾಂ (ರೂ. 5,000) ★ ಡಿವೈನ್ ಸ್ಪಾರ್ಕ್, ವಿರಾಜಪೇಟೆ (ರೂ. 3,000) ★ ಶ್ರೀ ರಾಮಚಂದ್ರ ಗೋಳಿ, ಮೈಸೂರು (ರೂ. 3,000) ★ ಡಾ। ಎ. ವಿ. ಶೆಣೈ, ತುಮಕೂರು (ರೂ. 2,500) ★ ಶ್ರೀ ಬಿ. ರಾಮಕೃಷ್ಣ ಸೋಮಯಾಜಿ, ಮಂಗಳೂರು (ರೂ. 2,500) ★ ಶ್ರೀ ಸಿ. ಪುಟ್ಟಸ್ವಾಮಿ ಗೌಡ, ಕ್ಯಾತನಹಳ್ಳಿ (ರೂ. 2,500) ★ ಶ್ರೀ ಅಶೋಕ ಆಳ್ವ, ಮಂಗಳೂರು (ರೂ. 1,500) ★ ಶ್ರೀ ನಾರಾಯಣ ಶೆಟ್ಟಿಗಾರ್, ಬೆಂಗಳೂರು (ರೂ. 1,009) ★ ಶ್ರೀ ವಾದಿರಾಜ ಆಚಾರ್, ಮಂಗಳೂರು (ರೂ. 1,005) ★ ದಿವ್ಯೆನ್ ಸ್ಪಾರ್ಕ್, ಶಿವಮೊಗ್ಗ (ರೂ. 1,001) ★ ಶ್ರೀಮತಿ ಭಾರತಿ ಶಂಕರ್ ಲಗ್ಗಿ, ತುಮಕೂರು (ರೂ. 1,001) ★ ಶ್ರೀ ವಿಜಯಕೃಷ್ಣ ಆರಾಧ್ಯ, ಶಿವಮೊಗ್ಗ (ರೂ. 1,000) ★ ಶ್ರೀ ಸ್ವಾಮಿ ಗೌಡ, ಕ್ಯಾತನಹಳ್ಳಿ (ರೂ. 1,000) ★ ಶ್ರೀ ಗುರೂಜೀ ದಾಸಿ, ಕಾರ್ಕಳ (ರೂ. 1,000) ★ ಶ್ರೀಮತಿ ಸರಸ್ವತಿ ರಮೇಶ ಪೂಂಜ, ಶಿವಮೊಗ್ಗ (ರೂ. 1,000) ★ ಶ್ರೀ ಟಿ. ಬಿ. ಸೂರ್ಯನಾರಾಯಣ, ಮೈಸೂರು (ರೂ. 1,000) ★ ಶ್ರೀ ಕೆ. ಪಿ. ನಂದನ ಪ್ರಭು, ಉಡುಪಿ (ರೂ. 1,000) ★ ಶ್ರೀಮತಿ ಶಾರದಾ ಮಣಿಯಮ್ಮ, ಕ್ಯಾತನಹಳ್ಳಿ (ರೂ. 1,000) ★ ಶ್ರೀ ಕೃಷ್ಣ ರಾವ್, ಮಂಗಳೂರು (ರೂ. 1,000) ★ ಶ್ರೀ ವಿಶ್ವೇಶ್ವರ ಕೆದಿಲಾಯ, ಪಾರಂಪಳ್ಳಿ (ರೂ. 1,000) ★ ಶ್ರೀ ಶ್ರೀಪತಿ ಸೋಮಯಾಜಿ, ಕುಂದಾಪುರ (ರೂ. 1,000) ★ ಶ್ರೀ ಶಿವಣ್ಣ, ಕ್ಯಾತನಹಳ್ಳಿ (ರೂ. 1,000) ★ ಶ್ರೀಮತಿ ಸುಭದ್ರಮ್ಮ ವಿ., ಶಿವಮೊಗ್ಗ (ರೂ. 501) ★ ಶ್ರೀ ಗುಂಡಪ್ಪ, ಶಿವಮೊಗ್ಗ (ರೂ. 500).

— ಇತರ ಸೇವೆಗೆ ಮುಂದಾದವರು —

● ದೇಗುಲಕ್ಕೆ ಸುಣ್ಣ ಬಣ್ಣ ಬಳಿಯುವ ಸೇವೆ: ಶ್ರೀ ಮುದ್ದಲಿಂಗ, S/o ಬಸವ ಲಿಂಗಯ್ಯ, ಕ್ಯಾತನಹಳ್ಳಿ ● ದೇಗುಲಕ್ಕೆ ಎರಡು ದೀಪದ ಕಂಬಗಳ ಸೇವೆ: ಶ್ರೀ ಕೇಶವ, ಡಿ.ಸಿ.ಸಿ. ಬ್ಯಾಂಕ್, ಮಂಡ್ಯ ● ನಿತ್ಯಪೂಜೆಗಾಗಿ ಜಗನ್ಮಾತೆಯ ಮೂರ್ತಿ: ಶ್ರೀಮತಿ ಜೆ. ಶಾಂತಕುಮಾರಿ, ಬೆಂಗಳೂರು ● ಗರ್ಭಗುಡಿಗೆ ಹಾಲುಗಲ್ಲಿನ ಸೇವೆ: ಶ್ರೀ ಮತ್ತು ಶ್ರೀಮತಿ ಕುಮಾರ್ ಹಾಸನ್, ಬೆಂಗಳೂರು ● ದೇಗುಲಕ್ಕೊಂದು ಮೈಕ್ ಸೆಟ್: ಶ್ರೀ ಭಾಸ್ಕರ ನಕ್ಷತ್ರಿ, ಬೆಂಗಳೂರು.

ನಿಮ್ಮ ಉದಾರ ನೆರವಿಗಾಗಿ ಕಾತರಿಸುವ —

**ಡಿವೈನ್ ಸ್ಪಾರ್ಕ್ (ರಿ.)**

ಕ್ಯಾತನಹಳ್ಳಿ – 571 427, ಪಾಂಡವಪುರ ತಾಲೂಕು, ಮಂಡ್ಯ ಜಿಲ್ಲೆ

ಇದೆಯೇ ಎಂದು ನಿಮ್ಮನ್ನೇ ಪ್ರಶ್ನಿಸಿಕೊಳ್ಳಬೇಕು. ಕೈಯಲ್ಲಿ 5 ರೂಪಾಯಿ ಹಿಡಿದುಕೊಂಡು ಪವನು ಬಂಗಾರಕ್ಕಾಗಿ ಹಂಬಲಿಸಿದರೆ ಎಂದಾದರೂ ಅದು ಕೈಗೂಡಲು ಸಾಧ್ಯವೇ? ದುಡಿದು 5000 ರೂಪಾಯಿ ಸಂಪಾದಿಸಿದಲ್ಲಿ ಮಾತ್ರ ಆ ಹಂಬಲ ಈಡೇರೀತಲ್ಲವೇ? ಅಂತೇನೇ ದೇವರೊಲುಮೆ ಗಳಿಸಲು ಅಂಥ ಪ್ರೀತಿ ನಿಮ್ಮಲ್ಲಿಲ್ಲವಾದಲ್ಲಿ, ಅಂಥ ಪ್ರೀತಿಯನ್ನು ಮೈಗೂಡಿಸಿಕೊಳ್ಳಲು ನೀವು ಮೊದಲು ಪ್ರಯತ್ನಿಸಬೇಕು.

ತನಗಾಗಿ ತಾಯಿ ಬಗೆಬಗೆಯಾಗಿ ದುಡಿಯುವ ಪರಿ ನೋಡಿ ಮಗುವಿನ ಹೃದಯದಲ್ಲಿ ತಾಯಿಯ ಬಗ್ಗೆ ಪ್ರೀತಿ ಉಕ್ಕುವುದಲ್ಲವೇ? ಅದೇ ರೀತಿ ಆ ದೇವರು ಸದ್ದಿಲ್ಲದೆ, ಸುದ್ದಿ ಮಾಡದೆ, ಸದಾ ಸಮರ್ಪಣ ಭಾವದಿಂದ ನಿಮಗಾಗಿ ದುಡಿಯುವ ಪರಿಯನ್ನೆಣಿಸಿದಲ್ಲಿ ನಿಮ್ಮಲ್ಲೂ ಆ ದೇವರ ಮೇಲೆ ಅತಿಶಯ ಪ್ರೀತಿ ಉಕ್ಕದಿರದು, ರಾತ್ರಿ ಎಲ್ಲವನ್ನೂ ಮರೆತು ಮಲಗಿರುವ ನಿಮಗೆ ಬೆಳಗ್ಗೆ ಎಚ್ಚರವಾಗುತ್ತಲೇ ನಿನ್ನೆಯ ನೆನಪನ್ನೆಲ್ಲ ಮರುಕಳಿಸುವಂತೆ ಮಾಡುವವರಾರು? ನೀವು ಉಂಡುದನ್ನೆಲ್ಲ ಜೀರ್ಣ ಮಾಡಿಸಿ ಪೋಷಕಾಂಶಗಳನ್ನು ಮೈಗೂಡಿಸಿ ಕಶ್ಮಲ ವಿಸರ್ಜನೆಗೆ ಅನುವು ಮಾಡುವವರಾರು? ನೀವು ಹಲ್ಲುಜ್ಜಿ ಮೈಕೈ ಕೊಳೆಯನ್ನು ನೀಗಿಸಿಕೊಳ್ಳುವಂತೆ ಆಂತರ್ಯದ ಕೊಳೆಯನ್ನೆಲ್ಲ ದೂರ ಮಾಡಿ ಅಂತಃಶುದ್ಧಿಗೈಯುವವರಾರು? ನಿಮ್ಮ ಕೈಯೋ, ಕಾಲೋ ಉಳುಕಿದರೆ ನಿಮಗೆ ಕೆಲಸ ಮಾಡಲಾಗುವುದೇ– ಸಪ್ಪಳ ಮಾಡಲಾಗುವುದೇ? ಹಾಗಾಗದಂತೆ ನಿಮ್ಮ ಚಲನೆ–ಚಾಲನೆಗೆ ಸುಗಮ ವ್ಯವಸ್ಥೆ ಮಾಡಿರುವವರಾರು? ಬಿಸಿ ಚಾ–ಕಾಫಿ ಕೈಮೇಲೆ ಬಿದ್ದು ಬೊಕ್ಕೆ ಬಂದರೆ, ಚೂರಿ ತಾಗಿ ಕೈ ಗಾಯವಾದರೆ ಅದನ್ನೆಲ್ಲ ರಿಪೇರಿ ಮಾಡುವವರಾರು? ತಲೆನೋವಿಗೆಂದು ನುಂಗಿದ ಗುಳಿಗೆಯ ಔಷಧಿಯನ್ನು ಹೊಟ್ಟೆಯಿಂದ ರಕ್ತಕ್ಕೆ ಸೇರಿಸಿ ರಕ್ತಪರಿಚಲನೆಯ ಮೂಲಕ ತಲೆಗೆ ಸಾಗಿಸಿ ನೋವನ್ನು ನೀಗಿಸುವವರಾರು?... ಯಾರು? ...ಯಾರು? ಆ ದೇವರೇ ಅಲ್ಲವೇ? ಆ ದೇವರು ನಿಮ್ಮ ಮೇಲೆ ಕ್ಷಣಕ್ಷಣವೂ ಸುರಿಸುತ್ತಿರುವ ಆ ಪ್ರೀತಿಯ ಮಳೆಯನ್ನೆಣಿಸಿದಾಗ ನಿಮಗೂ ಆ ದೇವರ ಮೇಲೆ ಅತಿಶಯ ಪ್ರೀತಿ ಉಕ್ಕದೇನು? ದೇವರೆಡೆಗೆ ನಿಮ್ಮನ್ನು ಸಾಗಿಸಲು ಅಥವಾ ದೇವರನ್ನು ನಿಮ್ಮೆಡೆಗೆ ಬರಸೆಳೆಯಲು ಅಂಥ ಅತಿಶಯ ಪ್ರೀತಿಯ ಅದ್ಭುತ ಒತ್ತಡ ಅಥವಾ ಸೆಳೆತ ಬೇಕು.




## ಭಗವದ್ಗೀತೆಯ ಸಂದೇಶ – ಕೆಲಸವೇ ಪೂಜೆ ಆಗಲಿ!

ದೇವರೊಲುಮೆಗೆ ಮಾಡುವ ಕೆಲಸ ಯಾವುದೆಂಬುದು ಮುಖ್ಯ ಅಲ್ಲ, ಆ ಕೆಲಸವನ್ನು ಮಾಡುವ ರೀತಿ ಯಾವುದೆಂಬುದು ಮುಖ್ಯ. ಎಷ್ಟೋ ಬಾರಿ ಗುರಿಯ ಕನಸು ಕಾಣುತ್ತ ದಾರಿಯನ್ನೇ ಮರೆಯುವುದಿದೆ. ಅದಕ್ಕೆಂದೇ ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಎಚ್ಚರಿಸುತ್ತಾನೆ –

*'ಕರ್ಮಣ್ಯೇವಾಧಿಕಾರಸ್ತೇ*
*ಮಾ ಫಲೇಷು ಕದಾಚನ ।*
*ಮಾ ಕರ್ಮಫಲಹೇತುರ್ಭೂಃ*
*ಮಾ ತೇ ಸಂಗೋಽಸ್ತ್ವಕರ್ಮಣಿ ॥'*

(ಫಲಾಪೇಕ್ಷೆಯಿಂದ ನೀನು ಕೆಲಸದಲ್ಲಿ ತೊಡಗಬೇಡ. ನಿನ್ನ ಕರ್ತವ್ಯವನ್ನು ನೆರವೇರಿಸುವುದರಲ್ಲೇ ನಿನ್ನ ನಿಷ್ಠೆ ಎಲ್ಲ ಇರಲಿ, ಅದೇ ಪೂಜೆ ಆಗಲಿ. ಆಗಲೇ ನಿನಗಾಗುವುದು ದೈವಕೃಪೆ.)

ಹೌದು, ಗೀತೆಯ ಈ ಮಾತು ಎಲ್ಲ ಸಾಧುಸಂತರ ಬಾಳಿನ ದಾರಿದೀಪವೇ ಆಗಿತ್ತು. ಅವರೆಲ್ಲ ದೇವರು ಮೆಚ್ಚುವ ರೀತಿಯಲ್ಲಿ ನಡೆದರು. ದೇವರನ್ನೇ ಪಡೆದರು. ಆದ್ದರಿಂದ ದೇವರನ್ನು ಪಡೆಯಲು ಬೇಕು ಆ ದೇವರು ಮೆಚ್ಚುವ ಕರ್ಮನಿಷ್ಠೆಯ ದಿನಚರಿ.

### ಭಾವಾಂತರಂಗದ ದೊರೆ, ಕರೆ

ದೇವರು ನೋಡುವುದು ನೀವು ಯಾವ ಉದ್ಯೋಗ ಮಾಡುತ್ತಿದ್ದೀರಿ ಎಂಬುದನ್ನಲ್ಲ, ನೀವು ನಿಮ್ಮ

ಉದ್ಯೋಗವನ್ನು ಹೇಗೆ ಮಾಡುತ್ತಿದ್ದೀರಿ ಎಂಬುದನ್ನು. ಇಷ್ಟು ಹೊತ್ತು ಜಪತಪ ಮಾಡಿದವರಿಗೆ ಮಾತ್ರ ಕೃಪೆ ಎಂಬ ಲೆಕ್ಕಾಚಾರ ಅವನದಲ್ಲ. ತನಗಾಗಿ ಕಾತರಿಸುವವರಿಗಾಗಿ ಮಾತ್ರ ಕೃಪೆ ಎಂಬ ಇಷ್ಟಾಚಾರ ಅವನದು. ನಿಮ್ಮ ಮನದಲ್ಲಿ ಆತನಿಗಾಗಿ ಅನನ್ಯ ಕಾತರತೆ ಇದೆ, ನೀವು ಎಲ್ಲರಲ್ಲೂ, ಎಲ್ಲವುದರಲ್ಲೂ ಆತನನ್ನೇ ನೋಡಬಲ್ಲಿರಿ ಎಂದಾದರೆ ಆತ ನಿಮ್ಮೆಡೆಗೆ ಓಡೋಡಿ ಬರುತ್ತಾನೆ. ಆದ್ದರಿಂದ ನಿಮ್ಮ ಹೃದಯದ ತೀವ್ರ ತುಡಿತವೇ—ಭಗವದ್ಭಾವವೇ ಆತನನ್ನು ನಿಮ್ಮೆಡೆಗೆ ಬರಸೆಳೆಯುವುದೇ ಹೊರತು ನಿಮ್ಮ ಉದ್ಯೋಗ, ಉಪಾಧಿಗಳಲ್ಲ. 'ಸನ್ಯಾಸಿಯೊಬ್ಬ ತನ್ನ ಆಶ್ರಮದ ಬಳಿಯಿದ್ದ ವೇಶ್ಯೆಯ ಮನೆಗೆ ಬರುವವರ ಬಗ್ಗೆಯೇ ಚಿಂತಿಸುತ್ತ ಸತ್ತಮೇಲೆ ನರಕ ಸೇರಿದ. ಆ ವೇಶ್ಯೆ ತಾನು ಮಾಡುತ್ತಿರುವ ಪಾಪಕೃತ್ಯಕ್ಕೆ ದಿನದಿನವೂ ಆ ದೇವರಲ್ಲಿ ಕಣ್ತುಂಬಿ ಮೊರೆದು ಕ್ಷಮೆಯಾಚಿಸುತ್ತ ತೀರಿದ ಮೇಲೆ ಸ್ವರ್ಗ ಸೇರಿದಳು'—ಎಂದು ನನ್ನ ಗುರೂಜೀ ಶ್ರೀರಾಮಕೃಷ್ಣರೊಂದು ಕತೆ ಹೇಳುತ್ತಿದ್ದರು. ಅಂದರೆ ದೇವರಕೃಪೆಗೆ ಯಾವ ಭಾವದಿಂದ ನೀವು ವರ್ತಿಸುವಿರಿ, ನಿಮ್ಮ ಆಂತರ್ಯದಲ್ಲಿ ತುಂಬಿರುವ ಭಾವಲಹರಿ ಎಂಥದು ಎಂಬುದೇ ನಿರ್ಣಾಯಕವಾದುದು.

ಒಂದು ಕೈಯಲ್ಲಿ ಕಂಬವನ್ನು ಗಟ್ಟಿಯಾಗಿ ಹಿಡಿದು ಅದೆಷ್ಟು ಬಾರಿ ಗರಗರನೆ ತಿರುಗಿದರೂ ಬೀಳದಂತೆ ಆ ದೇವರ ಮಹಿಮೆಯನ್ನು ಎಣಿಸುತ್ತ ಕ್ಷಣಕ್ಷಣವೂ ಮಾನಸಿಕವಾಗಿ ಆ ದೇವರ ನಾಮಸ್ಮರಣೆಯನ್ನು ಗೈಯುತ್ತಿದ್ದರೆ ಅದೇ ನಿರಂತರ ಜಪವೂ ಆಗುತ್ತದೆ, ದೈವೀಭಾವವನ್ನು ನಿಮ್ಮಲ್ಲಿ ಸ್ಥಾಯಿಯಾಗಿಸುವಲ್ಲೂ ನೆರವಾಗುತ್ತದೆ. ದಿನವೂ ಬೆಳಗ್ಗೆ ಒಂದು ಊದಿನ ಕಡ್ಡಿ ಹಚ್ಚಿಟ್ಟು ದಿನವಿಡೀ ನಿಮ್ಮ ಜೊತೆಗಿದ್ದು ಆತ ಮೆಚ್ಚುವ ದಾರಿಯಲ್ಲಿ ನಿಮ್ಮನ್ನು ಮುನ್ನಡೆಸುವಂತೆ ನಮ್ರ ಮೊರೆ ಸಲ್ಲಿಸಿ. ಆತ ನಿಮ್ಮೊಂದಿಗೇ ಇದ್ದಾನೆ ಎಂಬ ಭಾವದಿಂದ ಸಪ್ಲೈಯರ್ ಕೆಲಸ ಮಾಡಿ. ಗಿರಾಕಿಯಾಗಿ ಬಂದು ಆತ ನಿಮ್ಮ ಸೇವೆ ಸ್ವೀಕರಿಸುತ್ತಿದ್ದಾನೆಂದೆಣಿಸಿ, ಯಜಮಾನನಾಗಿ ನಿಂದು ನಿಮ್ಮ ಸೇವೆ ಪರೀಕ್ಷಿಸುತ್ತಿದ್ದಾನೆಂದೆಣಿಸಿ, ಪರಮ ಪ್ರೀತಿ ತಾಳ್ಮೆ, ನಯ ವಿನಯಗಳಿಂದ ನಗುನಗುತ್ತಾ ಸೇವೆ ಸಲ್ಲಿಸಿ. ನಿಮ್ಮ ಕೆಲಸವೇ ನಿಮ್ಮ ಪಾಲಿನ ಪೂಜೆ ಆಗಲಿ. ಪ್ರತಿಯೊಬ್ಬ ವ್ಯಕ್ತಿಯೊಡನೆ ವರ್ತಿಸುವ ರೀತಿಯೂ ಆ ಪೂಜೆಯ ಒಂದೊಂದು ಹೂ ಆಗಲಿ, 'ಮನ್ನಿಸಿ, ಮುನ್ನಡೆಸಿ, ದಾರಿತೋರಿ' ಎಂಬುದೇ ನಿಮ್ಮ ನಿತ್ಯ ಮಂತ್ರವಾಗಲಿ.

ನಿಮಗೆ ದೇವರೇ ಬೇಕಾದರೆ ದೇವರಿಗೆ ನೀವೇ ಬೇಕು. ನೀವು ದೇವರವರಾಗದೆ ದೇವರು ನಿಮ್ಮವನಾಗಲಾರ. ಆತನ ಕೃಪೆ ಗಳಿಸಲು ನೀವು ದೈವೀಗುಣಗಳ ಗಣಿಯಾಗಿ ಅವನಂಥವರಾಗಬೇಕು. ನಿಮ್ಮ ಕೆಲಸವೇ ಪೂಜೆ ಆಗಬೇಕು. 'ಮನ್ನಿಸಿ, ಮುನ್ನಡೆಸಿ, ದಾರಿ ತೋರಿ' ಎಂಬುದೇ ನಿಮ್ಮ ನಿತ್ಯ ಮಂತ್ರವಾಗಬೇಕು.

## ಹೃನ್ಮನಗಳ ವ್ಯಾಕುಲ ಮಿಡಿತ, ತುಡಿತ

ದಿನವಿಡೀ ದುಡಿದು ದಣಿದ ನೀವು ರಾತ್ರಿ ಮಲಗುವ ಮೊದಲು. ದಿನವಿಡೀ ದುಡಿಯಲು ಶಕ್ತಿಯನ್ನಿತ್ತ ಆ ದೇವರಿಗೆ ಕಣ್ತುಂಬಿ ಕೃತಜ್ಞತೆ ಅರ್ಪಿಸಿ. ಒಂದು ಊದಿನಕಡ್ಡಿಯನ್ನು ಹಚ್ಚಿಟ್ಟು, 'ಬೇರೆ ಸಾಧನೆ ಮಾಡಲಾಗಲಿಲ್ಲ ಪ್ರಭೂ, ಕ್ಷಮಿಸು ದೊರೆಯೇ! ಇಂದಿನ ನನ್ನ ಸೇವೆಯನ್ನೇ ಈಗ ನಿನಗರ್ಪಿಸುತ್ತಿದ್ದೇನೆ. ನಿನ್ನ ಸೇವೆಯನ್ನು ಇನ್ನಷ್ಟು ಸಮರ್ಪಕವಾಗಿ ಮಾಡುವ ಶಕ್ತಿ ಕರುಣಿಸು ತಂದೆ! ಈ ಊದಿನ ಕಡ್ಡಿ ಉರಿದು ಹೋಗುವಂತೆ ನನ್ನಂತರಂಗದ ಕೊಳೆಯನ್ನೆಲ್ಲ ಭಸ್ಮ ಮಾಡಿ ನಿನ್ನ ದಿವ್ಯಲೀಲೆಯನ್ನು ಆಸ್ವಾದಿಸುವ ಭಾಗ್ಯ ಕರುಣಿಸಲಾರೆಯಾ?' ಎಂದು ತೀವ್ರ ಅಪರಾಧೀಭಾವದ ಅಸಹಾಯಕತೆಯಿಂದ ಕಣ್ತುಂಬಿ ಬೇಡಿ, ಆತನ ಸ್ಮರಣೆಯಲ್ಲೇ ಮಲಗಿ. ಜಗದಲ್ಲೆಲ್ಲ ಕತ್ತಲು ಕವಿದಿದ್ದರೂ ನಿಮ್ಮ ಆಂತರ್ಯದಲ್ಲಿ ಅವನು ಬೇಕೆಂಬ ತುಡಿತ ತೀವ್ರವಾಗಿದ್ದರೆ, ಆ ದೇವರು ನಿಮ್ಮ ಮನಃಪಟಲದಲ್ಲಿ ಕಾಣಿಸಿ ನಿಮ್ಮ ಆಂತರ್ಯವನ್ನು ಬೆಳಗದಿರನು. ದೇವರು ಯಾವಾಗಲೂ ಮೆಚ್ಚುವುದು ತನ್ನಂಥವರನ್ನು, ಆತ ಒಲಿಯುವುದು ತನ್ನಂಥವರಿಗೆ. ನಿಮ್ಮ ಉದ್ಯೋಗ ಯಾವುದಾಗಿದ್ದರೂ ಪ್ರೀತಿ, ತಾಳ್ಮೆ, ಕ್ಷಮೆ, ಕರ್ತವ್ಯಪರತೆ, ನಿಸ್ವಾರ್ಥತೆಗಳ ಮೈಗೂಡಿಕೆಯಿಂದ ನೀವು ದೇವರಂಥವರಾದರೆ, ಆ ದೇವರೊಲುಮೆ ನಿಮಗೆ ದೊರೆಯುವುದು ಖಂಡಿತ. ನೆನಪಿಡಿ—ನೀವು ದೇವರವರಾದರೆ ದೇವರು ನಿಮ್ಮವನಾಗುತ್ತಾನೆ. *

## ಪ್ರಾರ್ಥನೆಯಿಂದ ಪರಿವರ್ತನೆ

ಕೆಸರು ಮೆತ್ತಿದ ಚಿನ್ನದುಂಗುರ ಕಂಗೊಳಿಸುವಂತಾಗಬೇಕಾದರೆ ಏನು ಮಾಡಬೇಕು? ಅದನ್ನು ನೀರಿನ ಧಾರೆಗೊಡ್ಡಿ ಪುನಃ ಪುನಃ ತಿಕ್ಕಿ ತೊಳೆಯಬೇಕಲ್ಲವೇ? ಆಂತರ್ಯದ ದೈವತ್ವಕ್ಕೂ 'ನಾನು' ಭಾವ ಪ್ರೇರಿತ ಅಜ್ಞಾನ–ಅಹಂಕಾರ ಅದೇ ರೀತಿ ಕವಿದಿರುತ್ತದೆ. ಆ ಅಜ್ಞಾನ–ಅಹಂಕಾರದ ಪದರನ್ನು ಸಾಮಾನ್ಯ ನೀರಿನಿಂದ ಕೊಚ್ಚಿ ಕರಗಿಸಿ ಹೋಗಲಾಡಿಸಲು ಸಾಧ್ಯವಿಲ್ಲ. ಅದಕ್ಕೆ ತೀವ್ರ ವ್ಯಾಕುಲತೆಯ ಕಂಬನಿಯ ಧಾರೆಯೇ ಬೇಕು. ಅಂಥ ಕಣ್ಣೀರಿನ ಪ್ರಾರ್ಥನೆ ಮಾತ್ರ ಅಂತರಂಗಸಂಸ್ಕರಣಗೈದು ಆತ್ಮಶಕ್ತಿ ಪ್ರಚೋದಿಸಿ ವ್ಯಕ್ತಿಯನ್ನು ಇನ್ನೂ ಉತ್ತಮನನ್ನಾಗಿ ಮಾಡಬಲ್ಲದು, ವ್ಯಕ್ತಿಯ ಹೃದಯ ಪರಿವರ್ತನೆಗೈದು ಹೊಸ ವ್ಯಕ್ತಿಯನ್ನಾಗಿ ಮಾರ್ಪಡಿಸಬಲ್ಲದು. ಆದ್ದರಿಂದ ಆ ದೇವರಿಗಾಗಿ ತುಡಿಯುತ್ತ ಸಲ್ಲಿಸುವ ಪ್ರಾರ್ಥನೆಯೇ ಆಂತರ್ಯದ ಕೊಳೆ ನಿವಾರಿಸುವ ಅಂತರಗಂಗೆ; ಆಂತರಿಕ ವಿಕಾಸದ ಶಿಖರಕ್ಕೇರಿಸುವ ದಾರಿದೀಪ.

ತನ್ನ ಹೃದಯದಲ್ಲಿ ಸದಾ ಬಂದು ನೆಲೆಸಿ ಮುನ್ನಡೆಸಬೇಕೆಂಬ ವಿಜಯದಾಸರ ತೀವ್ರ ವ್ಯಾಕುಲ ಮೊರೆಯೇ ಇಲ್ಲಿ ಪದ್ಯವಾಗಿ ರೂಪು ತಳೆದಿದೆ.

ಸದಾ ಎನ್ನ ಹೃದಯದಲ್ಲಿ ವಾಸಮಾಡೋ ಶ್ರೀಹರಿ।
ನಾದಮೂರ್ತಿ ನಿನ್ನ ಚರಣ
  ಮೋದದಿಂದ ಭಜಿಸುವೆನೋ॥

ಧ್ಯಾನವೆಂಬ ನವರತ್ನದ ಮಂಟಪದ ಮಧ್ಯದಲ್ಲಿ।
ಗಾನಲೋಲನ ಕುಳ್ಳಿರಿಸಿ
  ಜ್ಞಾನದಿಂದ ಭಜಿಸುವೆನೋ॥

ಭಕ್ತಿರಸವೆಂಬ ಮುತ್ತು ಮಾಣಿಕ್ಯದ ಹರಿವಾಣದಿ।
ಮುಕ್ತನಾಗಬೇಕು ಎಂದು
  ಮುತ್ತಿನಾರತಿಯೆತ್ತುವೆನೋ॥

ನಿನ್ನ ನಾನು ಬಿಡುವನಲ್ಲ ಎನ್ನ ನೀನು ಬಿಡಲು ಸಲ್ಲ।
ಘನ್ನಮಹಿಮ ವಿಜಯವಿಠಲ
  ನಿನ್ನ ಭಕ್ತನ ಕೇಳೋ ಸೊಲ್ಲ॥

ಭಾವುಕರಾಗಿ ಇಂಥ ಪದ್ಯಗಳನ್ನು* ಮೆಲ್ಲುತ್ತಿರುವುದರಿಂದ ಅಂತಃಶುದ್ಧಿ ಬೇಗ ಕೈಗೂಡಿ, ಆ ದೇವರೊಲುಮೆ ಬೇಗ ದೊರೆಯುವಂತಾಗುವುದು ಖಂಡಿತ. ಹೀಗೆ ಆ ದೇವರ ಕೃಪೆಯ replyಗೋ, supplyಗೋ apply ಮಾಡುವ ಪರಿಯೇ ಪ್ರಾರ್ಥನೆ. ಪ್ರಾರ್ಥನೆ ಎಂಬುದು ಅಂತರಂಗ ಪರಿವರ್ತನೆಗೈಯ ಬಲ್ಲ ಅದ್ಭುತ ಶಕ್ತಿ ಎಂಬುದು ನೋಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿ ಡಾ। ಅಲೆಕ್ಸಿಸ್ ಕೆರೆಲರ ನುಡಿ. ನಿಜವಾಗಿಯೂ ಯೇಸುಕ್ರಿಸ್ತನೆಂದಂತೆ ಹೃತ್ಪೂರ್ವಕವಾಗಿ ಪ್ರಾರ್ಥಿಸಿದರೆ ಆ ಪ್ರಾರ್ಥನೆ ಕೈಗೂಡಿಯೇ ಕೈಗೂಡುತ್ತದೆ.

## ದಿವ್ಯ ಸಾನ್ನಿಧ್ಯದಿಂದ ಸಾಕ್ಷಾತ್ಕಾರ

ನಿಮ್ಮ ಫೋಟೋ ತೆಗೆಯಲಿದ್ದಾರೆಂದೆಣಿಸಿ, ಆಗ ನೀವು ಪೂರ್ಣ ಜಾಗ್ರತರಾಗಿ ನಗುಮುಖದಿಂದ ಪೋಸ್ ಕೊಡುವುದಿಲ್ಲವೇ? ಆ ಫೋಟೋಗ್ರಾಫರ್‌ನಂತೆ ದೇವರೇ ನಿಮ್ಮ ಜೊತೆಗಿದ್ದು ಕ್ಷಣಕ್ಷಣವೂ ನಿಮ್ಮ ಫೋಟೋಗಳನ್ನು ತೆಗೆಯುತ್ತಾನೆಂದೆಣಿಸಿ. ಆಗ ಕ್ಷಣಕ್ಷಣವೂ ನೀವು ನಯ-ನಗು-ನಲಿವುಗಳಿಂದ ವರ್ತಿಸುವುದಿಲ್ಲವೇ? ಸಂತ ಬ್ರದರ್ ಲಾರೆನ್ಸ್ ಆ ದೇವರ ಸಾಕ್ಷಾತ್ಕಾರಕ್ಕೆ ಅನುಸರಿಸಿದ ರೀತಿ ಇದು. ಪ್ಯಾರಿಸಿನ ಕ್ರೈಸ್ತ ಸನ್ಯಾಸೀ ಮಠದ ಪಾಕ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಆತ, 'ಆ ದೇವರು ನನ್ನ ಜೊತೆಗಿದ್ದಾನೆ, ನನ್ನ ಕೆಲಸ ಕಾರ್ಯಗಳನ್ನೆಲ್ಲ ನೋಡುತ್ತ ಪರೀಕ್ಷಿಸುತ್ತಲೇ ಇದ್ದಾನೆ' ಎಂಬ (ಇ.ನೋ.ಪ.) ತತ್ವವನ್ನು ಅಕ್ಷರಶಃ ಪಾಲಿಸಿದ. ಬೆಂಕಿಯ ಸಾನ್ನಿಧ್ಯದಿಂದ ಚಳಿ ಓಡಿ ಹೋಗಿ ಬೆಚ್ಚಗಾಗುವಂತೆ, ಆನಂದ ಸಾಗರನಾದ ಆ ದೇವರು ಜೊತೆಗೇ ಇದ್ದಾನೆ ಎಂಬ ಭಾವನೆಯಿಂದ ಆತನಲ್ಲಿ ಚಿಂತೆಗಳೆಲ್ಲ ದೂರವಾಗಿ ಸದಾ ಆನಂದ ಉಕ್ಕುತ್ತಿತ್ತು. ಕೆಲಸ ಮೆಚ್ಚಿಕೆಯಾದರೆ ಮುಂಬಡ್ತಿ ನೀಡುವ ಅಧಿಕಾರಿಯೇ ಎದುರಿಗಿದ್ದಾನೆಂದರೆ ಆ ಮುಂಬಡ್ತಿಗಾಗಿ ಆ ಕೆಲಸವನ್ನು ಅತ್ಯಂತ ನಿಷ್ಠೆಯಿಂದ ಮಾಡಿ ಮುಗಿಸುವುದಿಲ್ಲವೇ? ಅದೇ ರೀತಿ ಕೃಪೆದೋರುವ ದೇವರೇ ಎದುರಿಗಿದ್ದಾನೆ, ತನ್ನ ಕೆಲಸದಿಂದ ಆತನನ್ನು ಮೆಚ್ಚಿಸಬೇಕು ಎಂದು ಆತನ ಧ್ಯಾನದಲ್ಲೇ ಆತ ಅಡಿಗೆ ಮನೆಯಲ್ಲಿನ ತನ್ನ ಪಾಲಿನ ಕೆಲಸಗಳನ್ನೆಲ್ಲ ತುಂಬ ಚೆನ್ನಾಗಿ ಮಾಡಿದ. ವಾತ್ಸಲ್ಯಮಯಿ ತಾಯಿ ಜೊತೆಗಿರುವಾಗ ಮಗುವಾಗಲೀ, ಪ್ರಿಯೆ ಜೊತೆಗಿರುವಾಗ ಪ್ರಿಯಕರನಾಗಲೀ ಸುಮ್ಮನಿರಲು ಸಾಧ್ಯವೇ? ಆಗ ಅತಿಶಯ ಪ್ರೀತಿಯ ಆ ಭಾವವೇ ಮಾತುಗಳಾಗಿ ವ್ಯಕ್ತವಾಗಿ ಆತ್ಮೀಯ ಸಲ್ಲಾಪ ಸಹಜವಾಗಿರುವಂತೆ, ಆತನೂ ಆ ಕೆಲಸಗಳ ಮಧ್ಯೆ ಆ ದೇವರೊಡನೆ ಪರಮ ಆತ್ಮೀಯತೆಯಿಂದ ಸರಸ ಸಲ್ಲಾಪಗೈದ. ರಫ್ತು ಮಾಡಿ ಹೆಚ್ಚಿನ ಬೇಡಿಕೆ ಗಿಟ್ಟಿಸಿಕೊಳ್ಳಲು ಅತ್ಯುತ್ಕೃಷ್ಟ ಗುಣಮಟ್ಟದ ವಸ್ತುಗಳನ್ನೇ ಸಲ್ಲಿಸುವಂತೆ, ಆ ದೇವರೊಲುಮೆ ಗಳಿಸಲು ಆ ದೇವರ ಸಾನ್ನಿಧ್ಯವನ್ನನುಭವಿಸುತ್ತ ಎಲ್ಲ ಕೆಲಸಗಳನ್ನೂ ಪರಮ ಪ್ರೀತಿಯಿಂದ ಮಾಡಿ ಆ ದೇವರಿಗರ್ಪಿಸಿದ, 'ಜನರಲ್ಲಿ ಮೌನ, ದೇವರಲ್ಲಿ ಕಲಹ' ತತ್ವಕ್ಕೆ ಜೀವಂತ ಭಾಷ್ಯವೇ ಆದ, ಆ ದೇವರನ್ನೇ ತನ್ನ ಪ್ರೀತಿಯಿಂದ ಬರಸೆಳೆದು ಆ ದೇವರ ಸಾಕ್ಷಾತ್ಕಾರದಿಂದ ಪುನೀತನೇ ಆದ. ಯಜ್ಞಶಾಲೆಯಲ್ಲಿರುವ ಋಷಿಗಳಿಗೆ ಮಾತ್ರ ಅಲ್ಲ, ಪಾಕಶಾಲೆಯಲ್ಲಿರುವ ಸೇವಕನಿಗೂ, ಪ್ರಯೋಗ ಶಾಲೆಯಲ್ಲಿರುವ ವಿಜ್ಞಾನಿಗೂ ಅವರು ಕೆಲಸ ಮಾಡುವ ವೈಖರಿಯನ್ನವಲಂಬಿಸಿ ದೇವರೊಲುಮೆ ಸಾಧ್ಯ ಎಂಬುದಕ್ಕೆ ಆತನ ಜೀವನವೇ ಉಜ್ವಲ ನಿದರ್ಶನ.

* ಇಂಥದೇ ಭಕ್ತಿಗೀತೆಗಳ ಸಂಕಲನವಾಗಿ ಇತ್ತೀಚೆಗೆ ಬಿಡುಗಡೆ ಆಗಿದೆ 'ಶ್ರೀ ಗುರೂಜೀ ಭಜನಾಮೃತ–2. ದಿನಚರಿಯನ್ನು ಪಾವನವಾಗಿಸಲು ನಿಮಗದು ಬೇಕೇ ಬೇಕು. ಆದ್ದರಿಂದ ಅದನ್ನು ಅವಶ್ಯ ಖರೀದಿಸಿ.

VIVEKA SAMPADA: A Unique Spiritual Magazine, Edited and Publised by Dr. A CHANDRASHEKHARA UDUPA
For VIVEKA PRAKASHANA, owned by Divine Park Trust (Regd.), Krishna Kuteera, SALIGRAMA – 576 225
Printed by Sri B. Narahari at Manipal Power Press, Manipal – 576 119.



# ಡಿವೈನ್ ಪಾರ್ಕ್
# ನಾನು ಮತ್ತು
# ವಿವೇಕ ಸಂಪದ



ಪರಮಪೂಜ್ಯ ಶ್ರೀ ನಾರಾಯಣಾಶ್ರಮ ಸ್ವಾಮಿಜೀ
ಶ್ರೀ ಕೋದಂಡಾಶ್ರಮ ಮಠ
ಹೆಬ್ಬೂರು – 572 120
ತುಮಕೂರು ಜಿಲ್ಲೆ

'ಉರಿಯುವ ದೀಪವಿದ್ದರೆ ಅದರಿಂದ ಅನೇಕಾನೇಕ ದೀಪಗಳನ್ನು ಹೊತ್ತಿಸಲು ಸಾಧ್ಯ. ಈಗ ಅನೇಕರ ಹೃನ್ಮನಗಳನ್ನು ಬೆಳಗಿಸುತ್ತ ಮುನ್ನಡೆಸುತ್ತಿರುವ ಸಾಲಿಗ್ರಾಮದ ಡಿವೈನ್ ಪಾರ್ಕ್ ಪ್ರಜ್ವಲಿಸುತ್ತಿರುವ ಅಂಥದೊಂದು ಅಧ್ಯಾತ್ಮ ದೀಪ. ತಮ್ಮ ನಿಷ್ಠ ಸಾಧನೆಯ ಎಣ್ಣೆಯನ್ನೆರೆದು ಡಾಕ್ಟರ್‌ಜೀ ಅವರು ಆ ದೀಪವನ್ನು ಉರಿಸುತ್ತಲೇ ಇದ್ದಾರೆ. ಜೊತೆಗೆ ಅಲ್ಲಿಂದ ಹೊರಬರುವ 'ವಿವೇಕ ಸಂಪದ' ಜನಮನದ ಕೊಳೆ ಕರಗಿಸಿ ಅವರನ್ನು ಪುನೀತರಾಗಿಸಿ ದೇವರೇ ಆಗಿಸುವ ಆಧ್ಯಾತ್ಮಿಕಗಂಗೆ. ಜ್ಞಾನ, ವಿಜ್ಞಾನ, ಸಾಹಿತ್ಯ, ಕಲೆಗಳ ಸುಂದರ ಸಂಗಮ ಅದು. ಅಲ್ಲಿನ ಒಂದೊಂದು ವಾಕ್ಯದಲ್ಲೂ ಒಂದೊಂದು ಉದ್ಗ್ರಂಥದ ಬೋಧನೆ ಇದೆ; ಜನಸಾಮಾನ್ಯರನ್ನು ಬಡಿದೆಬ್ಬಿಸಿ ಅವರ ವಿವೇಕವನ್ನು ಪ್ರಚೋದಿಸಿ ಬಾಳಿನ ಸಾರ್ಥಕತೆಯೆಡೆಗೆ ಮುನ್ನಡೆಸುವ ಶಕ್ತಿಸಂಚಯ ಇದೆ. ಅಂತರಂಗಸಂಸ್ಕರಣದಿಂದ ಯೋಗ್ಯ ವ್ಯಕ್ತಿಗಳ ನಿರ್ಮಾಣದ ಕೈಂಕರ್ಯದಲ್ಲಿ ತೊಡಗಿರುವ ಡಿವೈನ್ ಪಾರ್ಕ್‌ಗೆ ಉತ್ತರೋತ್ತರ ಶ್ರೇಯಸ್ಸನ್ನು ಶ್ರೀಚಕ್ರಾಧಿಷ್ಠಿತಳಾದ ಶ್ರೀ ಕಾಮಾಕ್ಷಿ ಶಾರದಾಂಬೆ ಕರುಣಿಸಲಿ !'

(ಶ್ರೀ ನಾರಾಯಣಾಶ್ರಮ ಸ್ವಾಮಿಜೀ)



ಶ್ರೀ ವಸಂತ ಕುಮಾರ ಪೆರ್ಲ
ಕಾರ್ಯಕ್ರಮ ನಿರ್ವಾಹಕರು
ಆಕಾಶವಾಣಿ
ಹಾಸನ – 573 201

'ಸ್ವಾರ್ಥ, ಮೋಸ, ದಗ, ವಂಚನೆಗಳೇ ತುಂಬಿರುವ ನಮ್ಮ ಸಮಾಜದಲ್ಲಿ ನಿಸ್ವಾರ್ಥತೆ, ಪ್ರಾಮಾಣಿಕತೆ, ಭಕ್ತಿ, ನಿಷ್ಠೆ ಮೊದಲಾದ ಮೌಲ್ಯಗಳ ಪುನರ್‌ಪ್ರತಿಷ್ಠೆ ಆಗಲು ಡಿವೈನ್ ಪಾರ್ಕ್‌ನಂಥ ಸಂಸ್ಥೆಗಳು ಬೇಕು. ಪಾಶ್ಚಾತ್ಯ ಭೌತಿಕ ಸುಖಲೋಲುಪತೆಯ ಕಡೆಗೆ ಜನರಿಂದು ಮರುಳಾಗಿರುವುದರಿಂದ ಆಂತರಿಕ ಅಶಾಂತಿ, ಗೊಂದಲಗಳೆಲ್ಲ ಹೆಚ್ಚಿವೆ. ನಿಜವಾದ ಆನಂದ, ಶಾಂತಿ, ಸುಖಗಳ ಮೂಲ ಹೊರಗಿಲ್ಲ – ಎಲ್ಲರೊಳಗೇ ಇದೆ ಎಂಬುದು ಸನಾತನ ಋಷಿ ಮುನಿಗಳು ಕಂಡುಕೊಂಡ ಸತ್ಯ. ಈಗ ಡಿವೈನ್ ಪಾರ್ಕ್, 'ವಿವೇಕ ಸಂಪದ'ಗಳು ಮಾಡುತ್ತಿರುವುದೂ ವೈಜ್ಞಾನಿಕತೆಯ ಬೆಳಕಿನಲ್ಲಿ ಅದೇ ಸತ್ಯದ ಪುನರುಜ್ಜೀವನ. ಉದ್ಧಾರದ ದಾರಿ ಕಾಣದೆ ಕಂಗಾಲಾಗಿರುವ ಅದೆಷ್ಟೋ ಜನರಿಗವು ದಾರಿತೋರಿ ಮುನ್ನಡೆಸಿವೆ; ತಮ್ಮಲ್ಲೇ ಇರುವ ಆತ್ಮಶಕ್ತಿಯನ್ನು ಜಾಗ್ರತಗೊಳಿಸಿಕೊಂಡು ಶ್ರೇಯಸ್ಸಿನ ಶಿಖರ ಏರುವ ಸಾಮರ್ಥ್ಯ ಕರುಣಿಸಿವೆ; ಪ್ರೀತಿ, ತಾಳ್ಮೆ ಮೊದಲಾದ ಉದಾತ್ತ ಗುಣಗಳ ಬೆಳಸಿನಿಂದ ಉತ್ತಮೋತ್ತಮ ವ್ಯಕ್ತಿಗಳನ್ನು ನಿರ್ಮಿಸಿವೆ, ನಿರ್ಮಿಸುತ್ತಿವೆ. ವ್ಯಷ್ಟಿ ಅಭಿವೃದ್ಧಿಯಿಂದ ಸಮಷ್ಟಿ ಅಭಿವೃದ್ಧಿ ಸಾಧ್ಯ ಎಂದು ಜನಮನದಲ್ಲಿ ಸದ್ವಿಚಾರದ 'ಹಣತೆ' ಹಚ್ಚುವ ಕಾಯಕ ಮಾಡುತ್ತಿರುವ ಡಿವೈನ್ ಪಾರ್ಕ್ – 'ವಿವೇಕ ಸಂಪದ'ಗಳಿಗೆ ಜಯವಿರಲಿ ಸದಾ !'

(ವಸಂತ ಕುಮಾರ ಪೆರ್ಲ)

'ದೀಪಾವಳಿಯು ಮನೆ-ಮನೆಯಲ್ಲೂ ದೀಪ ಬೆಳಗಿಸುವ ಹಬ್ಬ ಆದರೆ, ನನ್ನೀ ಆತ್ಮಶಕ್ತಿಜಾಗೃತಿ ಯೋಜನೆ ಮನ-ಮನವನ್ನೂ ಬೆಳಗಿಸುವ ದಿವ್ಯದೀಕ್ಷೆ. ಹಣತೆ ದೀಪ ಕೆಲವು ಕ್ಷಣ ಬೆಳಗಿ ಸಂತಸದ ಸವಿ ಉಣಿಸಿದರೆ, ಈ ಆತ್ಮಶಕ್ತಿಯ ಜ್ಯೋತಿ ಹಾಗಲ್ಲ – ಅನುದಿನವೂ ಅನುಕ್ಷಣವೂ ತೊಳಗಿ ಬೆಳಗುತ್ತ ನಿರಂತರವೂ ಆನಂದ, ಶಾಂತಿಗಳ ಅಕ್ಷಯ ಸಮಾರಾಧನೆಯನ್ನೇ ಗೈಯಬಲ್ಲದು. ಆಗ ನಿಮ್ಮ ಬಾಳೆಲ್ಲ ದೀಪಾವಳಿಯೇ, ಬೆಳ್ಳಂಬೆಳಕೇ.'

'ನಿತ್ಯ ದೀಪಾವಳಿಯ ಆ ಯೋಗವನ್ನು ನಿಮಗದೆಷ್ಟು ಬೇಗ ಕರುಣಿಸುವುದೆಂಬ ತವಕ ನನಗೆ. ಅದಕ್ಕೆಂದೇ ಆತ್ಮಶಕ್ತಿಜಾಗೃತಿ ಸಂಕೀರ್ಣವಾಗಿ ನಿರ್ಮಾಣವಾಗಲಿದೆ ಗ್ರೇಟರ್ ಡಿವೈನ್ ಪಾರ್ಕ್. ಎಷ್ಟು ಬೇಗ ಆ ನಿರ್ಮಾಣ ಕೈಗೂಡುವುದೋ ಅಷ್ಟು ಬೇಗ ನಿಮಗೊದಗುವುದು ನಿತ್ಯ ದೀಪಾವಳಿಯ ಸುಯೋಗ. ಆ ಯೋಗ ಬೇಗ ಬರಲು ಬೇಕೀಗ ನಿಮ್ಮೆಲ್ಲರ ತ್ಯಾಗ-ಸೇವೆ. ನಿಮ್ಮ ಉದಾರ ತ್ಯಾಗ-ಸೇವೆಗಳೇ ಗ್ರೇಟರ್ ಡಿವೈನ್ ಪಾರ್ಕ್‌ನ ಕನಸು ನನಸಾಗಿಸಬಲ್ಲ ಶಿಲ್ಪಿಗಳು'.



ಶ್ರೀ ಗುರೂಜೀ ಕನಸಿನ ನಿತ್ಯದೀಪಾವಳಿಯ ನಿತ್ಯನಲಿವಿನ ಯುಗ ಬೇಗ ಬರುವಂತಾಗಲೆಂದೇ ಹಾರೈಸುತ್ತ
ಉದಾರ ತ್ಯಾಗ, ಸೇವೆಗಳ ಉದಾತ್ತ ದೀಕ್ಷೆ ತೊಟ್ಟಿರುವ

# ವಿವೇಕ ಜಾಗ್ರತ ಬಳಗ, ಕುದುರೆಮುಖ

● ಗೌರವಾಧ್ಯಕ್ಷರು: ಶ್ರೀ ಸಿ. ಎಸ್. ಜೋಷಿ, ಶ್ರೀ ಬಾಲಸುಬ್ರಮಣ್ಯ ಕೆ., ಶ್ರೀ ಎಚ್. ಎಸ್. ಜೋಯಿಸ್ ● ಕಾರ್ಯಾಧ್ಯಕ್ಷರು: ಶ್ರೀ ಎಚ್. ಎಸ್. ಮೂರ್ತಿ ● ಗೌರವ ಉಪಾಧ್ಯಕ್ಷರು: ಶ್ರೀ ಪ್ರಕಾಶ ರಾವ್, ಶ್ರೀ ಎ. ಎಸ್. ನಾಗರಾಜ್, ಶ್ರೀ ಎಸ್. ಎಸ್. ರಾವ್ ● ಉಪಾಧ್ಯಕ್ಷರು: ಶ್ರೀ ಆರ್. ಆರ್. ಅರಸ್, ಶ್ರೀ ರಮೇಶ್ ಶೆಟ್ಟಿ ● ಪ್ರಧಾನ ಕಾರ್ಯದರ್ಶಿ: ಶ್ರೀ ಸಿದ್ದಪ್ಪ ಮಾಡಿಗ್ ● ಸಂಚಾಲಕರು: ಶ್ರೀ ಸಿ. ಹೆಚ್. ಪ್ರಕಾಶ್ ● ಖಜಾಂಚಿ: ಶ್ರೀ ಎಸ್. ಶೆಟ್ಟಿಗಾರ್ ● ಜೊತೆ ಕಾರ್ಯದರ್ಶಿಗಳು: ಶ್ರೀ ಎಸ್. ಕೆ. ಬಾಜೀಕರ್, ಶ್ರೀ ಎಸ್. ಸುಬ್ಬಕೃಷ್ಣ, ಶ್ರೀ ಕೆ. ಗಂಗಾಧರ, ಶ್ರೀ ಜೆ. ಶಂಕರಪ್ಪ, ಶ್ರೀ ನಾಗರಾಜ. ಎಂ. ಆರ್. ● ಸದಸ್ಯರು: ಶ್ರೀ ಸಿದ್ದರಾಮ ಆರ್. ಎಲ್., ಶ್ರೀ ಎನ್. ಸ್ವಾಮಿ ರಾವ್, ಶ್ರೀ ಎಸ್. ಆರ್. ಅರಸ್, ಶ್ರೀ ಕೆ. ಎಂ. ದಾಮೋದರ್, ಶ್ರೀ ಡಿ. ದೇವಾಡಿಗ್, ಶ್ರೀ ನಂಜಪ್ಪ, ಶ್ರೀ ಕೆ. ಪೂವಪ್ಪ, ಶ್ರೀ ವರದಪ್ಪ, ಶ್ರೀಮತಿ ಸಿ. ಅನಸೂಯ, ಶ್ರೀಮತಿ ಪಾರ್ವತಿ ಮಣಿ, ಶ್ರೀಮತಿ ಗಾಯತ್ರಿ.